


# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೧, ೨೦೧೨ (ಆಶ್ವಯುಜ ೧೯, ಶಕ ವರ್ಷ ೧೯೩೪) | ಸಂಚಿಕೆ ೪೧ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಸಂತೋಷ್ ಗೌಡ, ಪ್ರೊ. ಪಿಎಸ್ಐ (ನಿಸ್ತಂತು) ಚಾಮರಾಜನಗರ ಜಿಲ್ಲೆ ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: 35/ಸಿಬ್ಬಂದಿ–1/2011–12, ದಿನಾಂಕ: 17–04–2012

**ಪ್ರಸ್ತಾವನೆ:**

ಶ್ರೀ ಸಂತೋಷಗೌಡ ರವರು ಪಿ.ಎಸ್.ಐ (ನಿಸ್ತಂತು) ಆಗಿ ದಿನಾಂಕ: 03–12–2007 ರಂದು ನೇರ ನೇಮಕಾತಿ ಹೊಂದಿ ಮೂಲ ತರಬೇತಿಗಾಗಿ ವರದಿ ಮಾಡಿಕೊಂಡಿರುತ್ತಾರೆ. ಇವರು ಪ್ರಾಯೋಗಿಕ ತರಬೇತಿ ಪಡೆಯುತ್ತಿದ್ದ ಸಂದರ್ಭದಲ್ಲಿ ಮನೆಯ ಮೇಲ್ಛಾವಣಿಯಿಂದ ಕೆಳಗೆ ಬಿದ್ದಿರುವುದರಿಂದ ತಮಗೆ ಬೆನ್ನು ಮೂಳೆಯಲ್ಲಿ "Lumbar Spondylosis with sciatica" ಎಂಬ ಖಾಯಿಲೆಯಿಂದ ನರಳುತ್ತಿರುವುದಾಗಿ ತಿಳಿಸಿ ದಿನಾಂಕ 23–06–2009 ರಿಂದ ವೈದ್ಯಕೀಯ ಕಾರಣದ ಮೇಲೆ ರಜೆಯಲ್ಲಿರುತ್ತಾರೆ.

ಆದ್ದರಿಂದ ನೇಮಕಾತಿ ಪ್ರಾಧಿಕಾರಕ್ಕೆ ಒಳಪಟ್ಟಂತೆ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(ii) ಪ್ರಕಾರ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 02–06–2010 ರಿಂದ 03–09–2011 ರವರೆಗೆ ಮುಂದೂಡಲಾಗಿದೆ. ಸದರಿಯವರು ಕರ್ನಾಟಕ ಸಿವಿಲ್ ಸೇವೆಗಳು (ಪರಿವೀಕ್ಷಣೆ) ನಿಯಮಗಳು, 1977 ರ ನಿಯಮ 4 ಮತ್ತು 5(1) ರನ್ವಯ ಇವರು ಪ್ರಸ್ತುತ ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಅರ್ಹರಿದ್ದು ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ / ಕ್ರಿಮಿನಲ್ ಮೊಕದ್ದಮೆ ಬಾಕಿ ಇರುವುದಿಲ್ಲ ಅಥವಾ ಹೂಡಲು ಉದ್ದೇಶಿಸಿರುವುದಿಲ್ಲವೆಂದು ಇವರು ಗೈರು ಹಾಜರಾಗಿದ್ದು ದಿನಾಂಕ 04–09–2011 ರಿಂದ 19–10–2011 ರವರೆಗಿನ ಅವಧಿಯನ್ನು ಒಳಗೊಂಡಂತೆ ಇವರ ಖಾಯಂಪೂರ್ವ ಅವಧಿಯನ್ನು ದಿನಾಂಕ 04–09–2011 ರಿಂದ 20–10–2011 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು, 1977 ರ ನಿಯಮ 4 (1)(i) ರ ಪ್ರಕಾರ ಖಾಯಂಪೂರ್ವ ಅವಧಿ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 158 ಪೊಸಇ 2012, ಬೆಂಗಳೂರು, ದಿನಾಂಕ: 03–08–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಂತೋಷಗೌಡ ಪ್ರೊ.ಪಿ.ಎಸ್.ಐ. (ನಿಸ್ತಂತು) ರವರು ಪಿ.ಎಸ್.ಐ. (ನಿಸ್ತಂತು) ಹುದ್ದೆಗೆ ನಿಗಧಿಪಡಿಸಿರುವ ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ ಹಾಗೂ ಇವರು ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಅರ್ಹರಿರುವುದರಿಂದ ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ 04–09–2011 ರಿಂದ 20–10–2011 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು, 1977 ರ ನಿಯಮ 4 (1)(i) ರ ಪ್ರಕಾರ ಖಾಯಂಪೂರ್ವ ಅವಧಿ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**ಪಿ.ಆರ್. 1922**

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಎಂ.ಎನ್. ದೇಶನೂರ್, ಪಿ.ಎಸ್.ಐ. ರವರ ಖಾಯಂಪೂರ್ವ ಅವಧಿ ಘೋಷಿಸುವ ಬಗ್ಗೆ.

**ಓದಲಾಗಿದೆ** : ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: 66/ಸಿಬ್ಬಂದಿ–1/2008–09, ದಿನಾಂಕ: 23–11–2009 ಮತ್ತು 11–01–2012

**ಪ್ರಸ್ತಾವನೆ:**

ಶ್ರೀ ಎಂ.ಎನ್.ದೇಶನೂರ ರವರು ಪಿ.ಎಸ್.ಐ. (ಸಿವಿಲ್) ಹುದ್ದೆಗೆ ದಿನಾಂಕ 15–12–2003 ರಂದು ಸೇವೆಗೆ ಸೇರಿರುತ್ತಾರೆ. ಇವರ 2 ½ ವರ್ಷಗಳ ಪರೀಕ್ಷಾರ್ಥ ಅವಧಿಯು ದಿನಾಂಕ 15–06–2006 ರಂದು ಪೂರ್ಣಗೊಂಡು ಈ ಅವಧಿಯಲ್ಲಿ ನಿಗಧಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಆದರೆ ಕರ್ತವ್ಯ ನಿರ್ಲಕ್ಷತೆಗೆ ಸಂಬಂಧಿಸಿರುವಂತೆ ಪರೀಕ್ಷಾರ್ಥ ಅವಧಿಯಲ್ಲಿ ಅತೃಪ್ತಕರವಾಗಿದ್ದುದರಿಂದ ಕರ್ನಾಟಕ ಸಿವಿಲ್ ಸೇವಾ (ಪ್ರೊಬೇಷನ್) ನಿಯಮಗಳು, 1977 ರ ನಿಯಮ 4(i)(ii) ರನ್ವಯ ಸದರಿಯವರ ಪರೀಕ್ಷಾರ್ಥ ಅವಧಿಯನ್ನು ದಿನಾಂಕ: 15–06–2006 ರಿಂದ 14–09–2007 ರ ತನಕ ಒಂದು ವರ್ಷ ಮೂರು ತಿಂಗಳ ಕಾಲ ನೇಮಕಾತಿ ಪ್ರಾಧಿಕಾರದ ಅಧಿಕಾರಕ್ಕೆ ಒಳಪಟ್ಟು ವಿಸ್ತರಿಸಿರುವುದಾಗಿ ಇವರು ಕರ್ನಾಟಕ ಸಿವಿಲ್ ಸೇವೆಗಳು (ಪರಿವೀಕ್ಷಣೆ) ನಿಯಮಗಳು, 1977 ರ ನಿಯಮ 4 ಮತ್ತು 5 (1) ರನ್ವಯ ಇವರು ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಸಮರ್ಥರಾಗಿರುವುದರಿಂದ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ: 15–09–2007 ರಿಂದ 09–01–2008 ರವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 158 ಪೊಸಇ 2012, ಬೆಂಗಳೂರು, ದಿನಾಂಕ: 07–08–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಎನ್.ದೇಶನೂರ ರವರು ಪಿ.ಎಸ್.ಐ. (ಸಿವಿಲ್) ರವರು ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವುದರಿಂದ ಹಾಗೂ ಇವರು ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಅರ್ಹರಿರುವುದರಿಂದ ಸದರಿಯವರ ಖಾಯಂಪೂರ್ವ ಅವಧಿಯನ್ನು ಕರ್ನಾಟಕ ಸಿವಿಲ್ ಸೇವೆಗಳು (ಪರಿವೀಕ್ಷಣೆ) ನಿಯಮಗಳು, 1977 ರ ನಿಯಮ 4 (1)(i) ರನ್ವಯ ದಿನಾಂಕ 15–09–2007 ರಿಂದ 09–01–2008 ರವರೆಗೆ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**ಪಿ.ಆರ್. 1841**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪಿ.ರೊಡ್ಡಪ್ಪ, ಪಿ.ಎಸ್.ಐ (ನಿವೃತ್ತ) ಮತ್ತು ಇತರರು ನಗರ ವಿಶೇಷ ಶಾಖೆ (ಕ್ಷೇತ್ರ) ಬೆಂಗಳೂರು ನಗರ ರವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಅಪೀಲು(1)23/2010-11 ದಿನಾಂಕ 19-10-2010.
2) ಆರೋಪಿತರಿಗೆ 2ನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ 20-07-2011.
3) ಶ್ರೀ ಪಿ.ರೊಡ್ಡಪ್ಪ, ಪಿ.ಎಸ್.ಐ (ನಿವೃತ್ತ) ರವರು ನೀಡಿರುವ ಸಮಜಾಯಿಷಿ ದಿನಾಂಕ 27-08-2011.
4) ಶ್ರೀ ನಾಗಭೂಷಣ, ಹೆಚ್.ಸಿ-353 ಹಾಗೂ ಶ್ರೀ ಸಿದ್ಧರಾಮಯ್ಯ, ಹೆಚ್.ಸಿ -871 ರವರುಗಳು ನೀಡಿರುವ ಸಮಜಾಯಿಷಿ ದಿನಾಂಕ 29-08-2011.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 141 ಸಿಎನ್‌ಎಸ್11 ದಿನಾಂಕ 25-06-2012.

**ಪ್ರಸ್ತಾವನೆ :**

ಶ್ರೀ ಪಿ.ರೊಡ್ಡಪ್ಪ, ಪಿ.ಎಸ್.ಐ, ಶ್ರೀ ನಾಗಭೂಷಣ, ಹೆಚ್.ಸಿ-353 ಮತ್ತು ಶ್ರೀ ಸಿದ್ಧರಾಮಯ್ಯ, ಹೆಚ್.ಸಿ -871 ರವರುಗಳು ಈ ಹಿಂದೆ ನಗರ ವಿಶೇಷ ಶಾಖೆ (ಕ್ಷೇತ್ರ) ಬೆಂಗಳೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತಿದ್ದಾಗ ಎಸಗಿದ ಈ ಕೆಳಕಂಡ ಆಪಾದನೆಗೆ ಸದರಿಯವರುಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮ 6 ಮತ್ತು 8ರ ಅಡಿಯಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ರವರು ದಿನಾಂಕ 24-01-2008ರಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಸಹಾಯಕ ಪೊಲೀಸ್ ಕಮೀಷನರ್, ಶೇಷಾದ್ರಿಪುರಂ ಉಪ ವಿಭಾಗ, ಬೆಂಗಳೂರು ನಗರ ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಿರುತ್ತಾರೆ.

ಆಪಾದನೆ:

"ಬೆಂಗಳೂರು ಟರ್ಫ್ ಕ್ಲಬ್ ಕರ್ತವ್ಯಕ್ಕೆ ಸಿಬ್ಬಂದಿಯನ್ನು ನೇಮಿಸದೆ, ಟರ್ಫ್ ಕ್ಲಬ್‌ಗೆ ಸಿಬ್ಬಂದಿಯನ್ನು ನೇಮಿಸಿದ ಬಗ್ಗೆ ಪತ್ರ ವ್ಯವಹಾರ ಮಾಡಿ ಪೊಲೀಸ್ ಇನ್ಸ್‌ಪೆಕ್ಟರ್ ನಗರ ವಿಶೇಷ ಶಾಖೆ ವಿಭಾಗ, ಬೆಂಗಳೂರು ನಗರ ರವರ ಸೀಲನ್ನು ದುರುಪಯೋಗ ಮಾಡಿಕೊಂಡು ದಿನಾಂಕ 20-05-2006 ರಿಂದ 17-09-2007ರ ವರೆಗೆ ಬೆಂಗಳೂರು ಟರ್ಫ್ ಕ್ಲಬ್‌ನಿಂದ ಕರ್ತವ್ಯ ನಿರ್ವಹಿಸಿದ ಬಗ್ಗೆ ಪರಿಹಾರ ಭತ್ಯೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್, ನಗರ ವಿಶೇಷ ಶಾಖೆ, ವಿಭಾಗ, ಬೆಂಗಳೂರು ನಗರ ರವರ ಸೀಲನ್ನು ಹಾಕಿ ಗುರುತಿಸಲಾಗದ ರೀತಿಯಲ್ಲಿ ಸಹಿ ಮಾಡಿ ತಮ್ಮ ತಮ್ಮ ಹೆಸರುಗಳಿಗೆ ಚೆಕ್ ಮುಖಾಂತರ ಹಣವನ್ನು ಸ್ವೀಕರಿಸಿ, ಆ ಹಣವನ್ನು ಇಲಾಖೆಗೆ ಸಂದಾಯ ಮಾಡದೇ ಮತ್ತು ಸಿಬ್ಬಂದಿಯವರಿಗೆ ವಿತರಿಸದೆ ಲಕ್ಷಾಂತರ ರೂಪಾಯಿಗಳನ್ನು ದುರುಪಯೋಗ ಪಡಿಸಿಕೊಂಡಿರುತ್ತಾರೆ"

ವಿಚಾರಣಾಧಿಕಾರಿಗಳು ನಿಯಮಾನುಸಾರ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಿ, ಆರೋಪಿತರುಗಳ ವಿರುದ್ಧದ ಆರೋಪಗಳು ಸಾಬೀತಾಗುತ್ತವೆ ಎಂಬ ಅಭಿಪ್ರಾಯದೊಂದಿಗೆ ವಿಚಾರಣಾ ವರದಿ (ಮಿನಿಟ್ಸ್)ಯನ್ನು ಅವರ ನಡವಳಿ ದಿನಾಂಕ 07-07-2010ರಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ರವರಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿನ ಆರೋಪಿತರುಗಳಾದ ಶ್ರೀ ಪಿ.ರೊಡ್ಡಪ್ಪ, ಪಿ.ಎಸ್.ಐ, ಶ್ರೀ ನಾಗಭೂಷಣ, ಹೆಚ್.ಸಿ-353 ಮತ್ತು ಶ್ರೀ ಸಿದ್ಧರಾಮಯ್ಯ, ಹೆಚ್.ಸಿ-871 ರವರುಗಳು ಈ ಹಿಂದೆ ನಗರ ವಿಶೇಷ ಶಾಖೆ (ಕ್ಷೇತ್ರ) ಬೆಂಗಳೂರು ನಗರ ರವರುಗಳ ಪೈಕಿ ಶ್ರೀ ಪಿ.ರೊಡ್ಡಪ್ಪ, ಪಿ.ಎಸ್.ಐ ರವರು ದಿನಾಂಕ 31-03-2008ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿರುತ್ತಾರೆ ಆದ್ದರಿಂದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ನಿಯಮಗಳ ನಿಯಮ 214(1)(ಎ) ಪ್ರಕಾರ ಜಂಟಿ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆರೋಪಿತ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳಿಗೆ ನೋಟೀಸ್ ಜಾರಿ ಮಾಡಿ ಅವರ ಸಮಜಾಯಿಷಿಯನ್ನು ಕೋರಲಾಗಿತ್ತು. ಮೇಲೆ (3) ಮತ್ತು (4)ರಲ್ಲಿ ಓದಲಾದ ಪತ್ರದಲ್ಲಿ ಆರೋಪಿತ ಅಧಿಕಾರಿ/ಸಿಬ್ಬಂದಿಗಳ ಸಮಜಾಯಿಷಿಯನ್ನು ನೀಡಿರುತ್ತಾರೆ. ಸದರಿ ಸಮಜಾಯಿಷಿಗಳನ್ನು ಪರಿಶೀಲಿಸಿ ಗಮನಿಸಬಹುದಾದಂತಹ ಯಾವುದೇ ಹೊಸ ಅಂಶಗಳಿರುವುದಿಲ್ಲ ವಾದ್ದರಿಂದ ಆರೋಪಿತರಿಗೆ ದಂಡನೆಯನ್ನು ವಿಧಿಸಲು ನಿರ್ಣಯಿಸಿ ಆರೋಪಿತರುಗಳಲ್ಲಿ ಶ್ರೀ ನಾಗಭೂಷಣ-353 ರವರು ದಿನಾಂಕ 31-05-2012ರಂದು

ವಯೋ ನಿವೃತ್ತಿ ಹೊಂದಿರುವುದರಿಂದ ಹಾಗೂ ಶ್ರೀ ಸಿದ್ಧರಾಮಯ್ಯ, ಹೆಚ್.ಸಿ–871 ರವರು ದಿನಾಂಕ 31–05–2013ರಂದು ವಯೋ ನಿವೃತ್ತಿ ಹೊಂದಲಿರುವುದರಿಂದ ಆರೋಪಿತರಾದ ಶ್ರೀ ಪಿ.ರೊಡ್ಡಪ್ಪ, ಪಿ.ಎಸ್.ಐ (ನಿವೃತ್ತ) ಹಾಗೂ ಎಂ.ನಾಗಭೂಷಣ, ಹೆಚ್.ಸಿ(ನಿವೃತ್ತ) ರವರುಗಳಿಗೆ ರೂ.300/–ಗಳನ್ನು ಮೂರು ವರ್ಷಗಳ ಅವಧಿಯವರೆಗೆ ಇವರ ಪಿಂಚಣಿಯಲ್ಲಿ ತಡೆಹಿಡಿಯುವ ಮತ್ತು ಶ್ರೀ ಸಿದ್ಧರಾಮಯ್ಯ, ಹೆಚ್.ಸಿ. ರವರು ದಿನಾಂಕ 31–05–2013ರಂದು ವಯೋ ನಿವೃತ್ತಿ ಹೊಂದುವುದರಿಂದ ಇವರ ವಯೋ ನಿವೃತ್ತಿ ಹೊಂದುವ ದಿನಾಂಕ 31–05–2013ರ ವರೆಗೆ ಇವರ ಮೂಲ ವೇತನದ ಒಂದು ಹಂತವನ್ನು ಸಂಚಿತ ಪರಿಣಾಮ ರಹಿತವಾಗಿ ಇಳಿಸುವುದು ಹಾಗೂ ಇನ್ನುಳಿದ ಅವಧಿಗೆ ಅವರ ಪಿಂಚಣಿಯಲ್ಲಿ ಸದರಿ ಸಮನಾದ ಮೊತ್ತವನ್ನು ಕಟಾಯಿಸುವ ದಂಡನೆಯನ್ನು ವಿಧಿಸಲು ನಿರ್ಣಯಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ.ಒಇ 513 ಪೊಸಇ 2010, ಬೆಂಗಳೂರು, ದಿನಾಂಕ: 13–07–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಪಿ.ರೊಡ್ಡಪ್ಪ, ಪಿ.ಎಸ್.ಐ (ನಿವೃತ್ತ) ಹಾಗೂ ಎಂ.ನಾಗಭೂಷಣ, ಹೆಚ್.ಸಿ(ನಿವೃತ್ತ) ರವರುಗಳಿಗೆ ಕೆ.ಸಿ.ಎಸ್.ಆರ್. ನಿಯಮ 214(1)ಎ ಅನ್ವಯ ಪ್ರತಿ ತಿಂಗಳು ರೂ.300/–ಗಳನ್ನು ಮೂರು ವರ್ಷಗಳ ಅವಧಿಯವರೆಗೆ ಇವರ ಪಿಂಚಣಿಯಲ್ಲಿ ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ ಮತ್ತು ಶ್ರೀ ಸಿದ್ಧರಾಮಯ್ಯ, ಹೆಚ್.ಸಿ. ರವರು ದಿನಾಂಕ 31–05–2013ರಂದು ವಯೋ ನಿವೃತ್ತಿ ಹೊಂದುವುದರಿಂದ ಇವರ ವಯೋ ನಿವೃತ್ತಿ ಹೊಂದುವ ದಿನಾಂಕ 31–05–2013ರ ವರೆಗೆ ಇವರ ಮೂಲ ವೇತನದ ಒಂದು ಹಂತವನ್ನು ಸಂಚಿತ ಪರಿಣಾಮ ರಹಿತವಾಗಿ ಇಳಿಸುವುದು ಹಾಗೂ ಇನ್ನುಳಿದ ಅವಧಿಗೆ ಅವರ ಪಿಂಚಣಿಯಲ್ಲಿ ಸದರಿ ಸಮನಾದ ಮೊತ್ತವನ್ನು ಕಟಾಯಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**ಪಿ.ಆರ್. 1981**

**ಒಳಾಡಳಿತ ಸಚಿವಾಲಯ**

**ವಿಷಯ** : ಶ್ರೀ ಹೆಚ್.ಎಲ್. ನಾಗರಾಜ್, ಡಿವೈ.ಎಸ್.ಪಿ. ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ** :
1) ಡಿಜಿ ಮತ್ತು ಐಜಿಪಿ ರವರ ಆದೇಶ ಸಂಖ್ಯೆ: ಸಿಬಿ(5)117/2010–11, ದಿನಾಂಕ: 01–08–2011
2) ಶ್ರೀ ಹೆಚ್.ಎಲ್ ನಾಗರಾಜ, ಡಿವೈ.ಎಸ್.ಪಿ. ರವರ ಮೇಲ್ಮನವಿ ದಿನಾಂಕ: 05–11–2011
3) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5)117/2010–11, ದಿನಾಂಕ: 18–02–2012

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಹೆಚ್.ಎಲ್. ನಾಗರಾಜ್, ಡಿವೈ.ಎಸ್.ಪಿ. ರವರು ಈ ಹಿಂದೆ ಉದಯಗಿರಿ ಪೊಲೀಸ್ ಠಾಣೆ, ಮೈಸೂರು ನಗರದಲ್ಲಿ ಪಿ.ಐ. ಯಾಗಿ ಕರ್ತವ್ಯ ನಿರ್ವಹಿಸುತ್ತಿರುವಾಗ ಎಸಗಿದರೆನ್ನಲಾದ ಆರೋಪಗಳ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮ 7 ರನ್ವಯ ನೋಟೀಸ್ ಜಾರಿ ಮಾಡಿ ಅವರಿಂದ ವಿವರಣೆ ಪಡೆದು ಅವರ ನೀಡಿರುವ ವಿವರಣೆಯನ್ನು ಒಪ್ಪದ ಕಾರಣ ಅಧಿಕಾರಿಗಳ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷದ ಕಾಲ ತಡೆಹಿಡಿದು ದಿನಾಂಕ: 01–08–2011 ರಂದು ಪೊಲೀಸ್ ಮಹಾ ನಿರ್ದೇಶಕರು ಆದೇಶಿಸಿರುತ್ತಾರೆ.

ಮೇಲೆ (2) ರ ಪತ್ರದಲ್ಲಿ ಶ್ರೀ ಹೆಚ್.ಎಲ್. ನಾಗರಾಜ್ ರವರು ಡಿಜಿಪಿ ರವರ ಆದೇಶದ ವಿರುದ್ಧ ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿ ಈ ಪ್ರಕರಣವು ನ್ಯಾಯಾಲಯದ ಮುಂದೆ ಬಂದಾಗ ತಾವು ಆ ಠಾಣೆಯಲ್ಲಿ ಕರ್ತವ್ಯದಲ್ಲಿರಲಿಲ್ಲ ಎಂದು ಪ್ರಕರಣ ನ್ಯಾಯಾಲಯದ ಮುಂದೆ ಬಂದಾಗ ಅಂದು ಕರ್ತವ್ಯನಿರ್ವಹಿಸುತಿದ್ದ ಪೊಲೀಸ್ ಅಧಿಕಾರಿಗಳು ನ್ಯಾಯಾಲಯದ ಮುಂದೆ ಅಭಿಯೋಜಕರ ಮುಖಾಂತರ ವಾದ ಮಂಡಿಸಬೇಕಾಗಿದ್ದು, ಅಭಿಯೋಜಕರು ಪ್ರಕರಣವನ್ನು ನ್ಯಾಯಾಲಯದ ಮುಂದೆ ಸಮರ್ಪಕವಾಗಿ ಮಂಡಿಸದೆ ಆರೋಪಿಗಳು ಬಿಡುಗಡೆಯಾಗಿರುವುದಕ್ಕೆ ತಮ್ಮನ್ನು ಆರೋಪಿಯನ್ನಾಗಿಸಿರುವುದು ಸೂಕ್ತವಾಗಲಾರದು ಹಾಗೂ ಪ್ರಕಣದಲ್ಲಿನ ವಿಚಾರಣೆಯ ಕಾಲಕ್ಕೆ 19 ಸಾಕ್ಷಿಗಳು, 25 ದಾಖಲೆಗಳು, 9 ಮುದ್ದೆಮಾಲುಗಳನ್ನು ಪರೀಕ್ಷಿಸಿ ನ್ಯಾಯದ ವಿಮರ್ಷೆ ಮಾಡಿ ಆರೋಪವನ್ನು ಫಿರ್ಯಾದಿಗಳೆ ಬೆಂಬಲಿಸದೆ ಇದ್ದ ಕಾರಣ ಹಾಗೂ

ಪ್ರಕರಣದ 18 ಸಾಕ್ಷಿಗಳು ಪ್ರತಿಕೂಲ ಸಾಕ್ಷಿ ನೀಡಿರುವುದರಿಂದ ಆರೋಪಿಗಳು ನ್ಯಾಯಾಲಯದಿಂದ ಬಿಡುಗಡೆಯಾಗಲು ಕಾರಣವಾಗಿದ್ದು, ತಮ್ಮ ಪಾತ್ರವೇನು ಇಲ್ಲದ ಕಾರಣ ತಮಗೆ ಡಿಜಿಪಿ ರವರು ವಿಧಿಸಿದ್ದ ದಂಡನೆಯನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಮೇಲ್ಮನವಿದಾರರು ಸದರಿ ಪ್ರಕರಣದಲ್ಲಿ ನ್ಯಾಯಾಲಯದಲ್ಲಿ ಸಾಕ್ಷ್ಯವನ್ನು ನುಡಿಯುವ ಸಂದರ್ಭದಲ್ಲಿ ಆರೋಪವನ್ನು ರುಜುವಾತು ಪಡಿಸುವ ನಿಟ್ಟಿನಲ್ಲಿ ಸಾಕ್ಷಿ ನುಡಿಯದೆ, ಕರ್ತವ್ಯಲೋಪ ಎಸಗಿರುವುದರಿಂದ, ತಮ್ಮ ಕಚೇರಿಯಿಂದ ವಿಧಿಸಲಾದ ಶಿಕ್ಷೆಯು ಸಮಂಜಸವಾಗಿರುವುದರಿಂದ, ಮೇಲ್ಮನವಿದಾರರ ಮೇಲ್ಮನವಿಯನ್ನು ತಿರಸ್ಕರಿಸುವ ಮೂಲಕ ತಮ್ಮ ಕಛೇರಿಯ ಶಿಕ್ಷಾದೇಶವನ್ನು ಎತ್ತಿಹಿಡಿಯಬೇಕೆಂದು ಡಿಜಿ ಮತ್ತು ಐಜಿಪಿ ರವರು ಮೇಲ್ಮನವಿದಾರರ ಅಪೀಲನ್ನು ತಿರಸ್ಕರಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಕರಣವನ್ನು ಪರಿಶೀಲಿಸಲಾಗಿದೆ. ಸರ್ಕಾರವು ಮೇಲ್ಮನವಿದಾರರಾದ ಶ್ರೀ ಹೆಚ್.ಎಲ್. ನಾಗರಾಜು ರವರು ಮೊಕದ್ದಮೆ ಸಂಖ್ಯೆ: 120/07 ರ ತನಿಖಾಧಿಕಾರಿಯಾಗಿದ್ದು, ನ್ಯಾಯಾಲಯದಲ್ಲಿ ವಿಚಾರಣೆಯ ಸಮಯದಲ್ಲಿ ಆರೋಪಿತರನ್ನು ಗುರುತಿಸಲು ಆಗುತ್ತಿಲ್ಲವೆಂದು ಮತ್ತು ಯಾವ ಆರೋಪಿತರಿಂದ ಮುದ್ದೆಮಾಲುಗಳನ್ನು ವಶಪಡಿಸಿಕೊಳ್ಳಲಾಯಿತು ಎಂಬ ಬಗ್ಗೆ ರುಜುವಾತು ಪಡಿಸಲು / ಸಾಕ್ಷ್ಯ ಹೇಳುವಲ್ಲಿ ವಿಫಲರಾಗಿದ್ದು, ಪ್ರಕರಣದ ಆರೋಪಿಗಳು ಬಿಡುಗಡೆ ಹೊಂದಲು ಕಾರಣರಾಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎಲ್. ನಾಗರಾಜ್, ಡಿವೈ.ಎಸ್.ಪಿ. ರವರ ಮೇಲ್ಮನವಿಯನ್ನು ತಿರಸ್ಕರಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 459 ಪೊಸಿಪ 2011, ಬೆಂಗಳೂರು, ದಿನಾಂಕ: 05–07–2012**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಹೆಚ್.ಎಲ್. ನಾಗರಾಜ್, ಡಿವೈ.ಎಸ್.ಪಿ. ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ತಮ್ಮ ಆದೇಶ ಸಂಖ್ಯೆ: ಸಿಬಿ(5)117/2010–11, ದಿನಾಂಕ: 01–08–2011 ರಲ್ಲಿ ವಿಧಿಸಿರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳ ಮೇಲೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ತಡೆಹಿಡಿಯುವ ದಂಡನೆಯನ್ನು ಸ್ಥಿರೀಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 1923**

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ.ಎಲ್. ವೇಣುಗೋಪಾಲ, ಸಿಪಿಸಿ–535, ಆರ್.ಸಿ.ಐ.ಬಿ., ಸಿ.ಐ.ಡಿ., ದಕ್ಷಿಣ ವಲಯ, ಜಲಪುರಿ ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಮಂಡ್ಯ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಡಿಇ/16/2009–10 (ಓ.ಬಿ. ಸಂಖ್ಯೆ: 226/10–11) ದಿನಾಂಕ: 01–9–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/52/2010–11 (ಓ.ಬಿ. ಸಂಖ್ಯೆ: 62/2010–11) ದಿನಾಂಕ: 25–02–2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 24–6–2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/25/2011–12 ದಿನಾಂಕ: 21–10–11
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 20 ಸಿಎನ್‌ಎಸ್ 2012 ದಿನಾಂಕ: 25–6–2012

**ಪ್ರಸ್ತಾವನೆ:**

ಶ್ರೀ ಎಂ.ಎಲ್. ವೇಣುಗೋಪಾಲ, ಇವರು ಮಂಡ್ಯ ಸಂಚಾರಿ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅತೀವ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ವೇಣುಗೋಪಾಲ, ಸಿಪಿಸಿ–535, ಮಂಡ್ಯ ಸಂಚಾರಿ ಪೊಲೀಸ್ ಠಾಣೆ ಹಾಲಿ ಓ.ಓ.ಡಿ. ಗಣಕಯಂತ್ರ ವಿಭಾಗ, ಜಿಲ್ಲಾ ಪೊಲೀಸ್ ಕಛೇರಿ, ಮಂಡ್ಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, (ಹಾಲಿ ಅಮಾನತ್ತಿನಲ್ಲಿರುತ್ತಾರೆ) ನೀವು ದಿನಾಂಕ: 09–10–2009 ರಂದು ಬೆಳಿಗ್ಗೆ 11–30ರ ಸಮಯದಲ್ಲಿ ಶ್ರೀ ಹೆಚ್.ಆರ್. ಚಂದ್ರಶೇಖರ, ದ್ವಿತೀಯ ದರ್ಜೆ ಸಹಾಯಕ, ಲೆಕ್ಕ ಶಾಖೆ ಡಿ.ಪಿ.ಓ. ಮಂಡ್ಯ ರವರು ಕಡತಗಳಿಗೆ ಸಹಿ ಮಾಡಿಸಲು ಎಸ್.ಪಿ. ಸಾಹೇಬರವರ ಕೊಠಡಿಯ ಮುಂದೆ ನಿಂತಿದ್ದಾಗ ಸಿ.ಪಿ.ಸಿ.–535, ಆದ ನೀವು ಇವರನ್ನು ಉದ್ದೇಶಿಸಿ ನನಗೆ ಕೊಡಬೇಕಾದ ಹಣವನ್ನು ಯಾವಾಗ ಕೊಡುತ್ತೀಯಾ ಎಂದು ಕೇಳಿದ್ದು, ಅದಕ್ಕೆ ಶ್ರೀ ಚಂದ್ರಶೇಖರ, ದ್ವಿ.ದ.ಸ. ರವರು ತೊಂದರೆ ಇರುವುದರಿಂದ ನಾಳೆ ಕೊಡುವುದಾಗಿ ಹೇಳಿದಾಗ ನೀವು ಅವ್ಯಾಚ್ಯ ಶಬ್ದಗಳಿಂದ ಬೈದು ಏಕಾ–ಏಕಿ ಕರ್ತವ್ಯನಿರತರಾಗಿದ್ದ ಶ್ರೀ ಚಂದ್ರಶೇಖರ, ದ್ವಿ.ದ.ಸ. ರವರ ಕೆನ್ನೆಗೆ ಹೊಡೆದಿರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು, ಕಛೇರಿಯ ವೇಳೆಯಲ್ಲಿ ಇತರೆ ಸಿಬ್ಬಂದಿಗಳ ಎದುರು ಸಾರ್ವಜನಿಕವಾಗಿ ಅವಮಾನವಾಗುವ ರೀತಿಯಲ್ಲಿ ವರ್ತಿಸುತ್ತೀರಿ. ಹೀಗೆ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಅಶಿಸ್ತು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 01–09–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ. ದಿನಾಂಕ: 09–10–09 ರಿಂದ 03–12–09ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 25–02–2011ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದ ಅವಧಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಸ್ಥಿರೀಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 71 ಪೊಸಿಅ 2011 ಬೆಂಗಳೂರು, ದಿನಾಂಕ: 10–7–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಲ್. ವೇಣುಗೋಪಾಲ, ಸಿಪಿಸಿ–535, ಆರ್.ಸಿ.ಐ.ಬಿ., ಸಿ.ಐ.ಡಿ., ದಕ್ಷಿಣ ವಲಯ, ಜಲಪುರಿ ಮೈಸೂರು, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 01–9–2010ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದವರೆಗೆ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ ಹಾಗೂ ಅಮಾನತ್ತಿನ ಅವಧಿಯನ್ನು ಇವರ ಹಕ್ಕಿನಲ್ಲಿರುವ "ಗಳಿಕೆ ರಜೆ" ಯಿಂದ ಕಡಿತಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 2013**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹನುಮಂತರಾಯ, ಸಿ.ಎಚ್.ಸಿ.-13, ಡಿ.ಸಿ.ಆರ್.ಬಿ., ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ(3)/ಪಿಆರ್/79&80/07 ದಿನಾಂಕ: 04-09-2007

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು(103)/ ಈವ/2007-10/2238 (ಓ.ಬಿ. ಸಂಖ್ಯೆ: 383/ಈವ/2010) ದಿನಾಂಕ: 20-5-2010

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 25-10-2010

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/66/2010-11 ದಿನಾಂಕ: 05-9-11

5) ಕಾರಣ ಕೇಳುವ ನೋಟೀಸ್ ಸಂಖ್ಯೆ: ಒಇ 165 ಪೊಸಿಅ 2010 ದಿನಾಂಕ: 07-01-2012

6) ಅರ್ಜಿದಾರರ ಸಮಜಾಯಿಷಿ ದಿನಾಂಕ: 29-02-2012

7) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 8 ಸಿಎನ್‌ಎಸ್ 2012 ದಿನಾಂಕ: 25-6-2012

**ಪ್ರಸ್ತಾವನೆ:**

ಶ್ರೀ ಹನುಮಂತರಾಯ, ಸಿ.ಎಚ್.ಸಿ.-13, ಇವರು ಸಿಂಧನೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮ 1965ರ ನಿಯಮ 7 ರಡಿಯಲ್ಲಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

> "ನೀವು ಈ ಹಿಂದೆ ಸಿಂಧನೂರು ನಗರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ವಾರಸುದಾರರಿಲ್ಲದ ದ್ವಿಚಕ್ರ ವಾಹನಗಳನ್ನು ನಿಮಗೆ ಸರ್ಕಾರಿ ಕೆಲಸಕ್ಕಾಗಿ ಉಪಯೋಗಿಸಲು ಈ ಹಿಂದಿನ ಪಿ.ಎಸ್.ಐ. ಸಿಂಧನೂರು ಶ್ರೀ. ಪರಮೇಶ್ವರಪ್ಪ ನೀಡಿದ್ದು, ನೀವು ಸದರಿ ಠಾಣೆಯಿಂದ ವರ್ಗಾವಣೆ ಹೊಂದಿ ಹೋದಾಗ ಸದರಿ ವಾಹನಗಳನ್ನು ಜಮಾಮಾಡದೇ ನಿಮ್ಮೊಂದಿಗೆ ಸ್ವತ: ಕೆಲಸಕ್ಕಾಗಿ ಉಪಯೋಗಿಸಲು ತೆಗೆದುಕೊಂಡು ಹೋಗಿ ದುರ್ನಡತೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 04-09-2007ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ ಹಾಗೂ ದಿನಾಂಕ: 14-04-2007 ರಿಂದ 17-08-07ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯು ಕಡಿಮೆಯಿದ್ದು, ಆರೋಪಕ್ಕೆ ಅನುಗುಣವಾಗಿರುವುದಿಲ್ಲವೆಂದು ಪರಿಗಣಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ವರ್ಷಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 20-5-2010ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು

1965ರ ನಿಯಮ 13 ರನ್ವಯ ಮೇಲ್ಮನವಿ ಪ್ರಾಧಿಕಾರಕ್ಕೆ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಹೆಚ್ಚಿಸುವ ಅಧಿಕಾರವಿರುವುದಿಲ್ಲ. ಆದರೆ ಅರ್ಜಿದಾರರ ವಿರುದ್ಧದ ಆರೋಪವು ಗಂಭೀರ ಸ್ವರೂಪದ್ದಾಗಿದ್ದು, ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯು ಅಲ್ಪ ಪ್ರಮಾಣದ್ದಾಗಿದೆಯೆಂದು ಸರ್ಕಾರವು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿದ್ದು, ಸದರಿ ನೋಟೀಸಿಗೆ ಅರ್ಜಿದಾರರು ಓದಲಾದ (6)ರ ಪತ್ರದಲ್ಲಿ ಸಮಜಾಯಿಷಿಯನ್ನು ನೀಡಿದ್ದು, ಸದರಿ ಸಮಜಾಯಿಷಿಯನ್ನು ಪರಿಶೀಲಿಸಿ ಸಮಜಾಯಿಷಿಯಲ್ಲಿ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರದ ಕಾರಣ ಅರ್ಜಿದಾರರಿಗೆ ದಂಡನೆಯನ್ನು ಹೆಚ್ಚಿಸುವ ಕುರಿತು ಓದಲಾದ (7)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 165 ಪೊಸಿಅ 2010 ಬೆಂಗಳೂರು, ದಿನಾಂಕ: 10–7–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹನುಮಂತರಾಯ, ಸಿ.ಎಚ್.ಸಿ.–13, ಡಿ.ಸಿ.ಆರ್.ಬಿ., ರಾಯಚೂರು ಜಿಲ್ಲೆ, ಇವರಿಗೆ ದಿನಾಂಕ: 20–5–2010ರ ಆದೇಶದಲ್ಲಿ ಮೇಲ್ಮನವಿ ಪ್ರಾಧಿಕಾರವು ವಿಧಿಸಿದ ದಂಡನಾದೇಶವನ್ನು ರದ್ದುಪಡಿಸಿ ದಿನಾಂಕ: 04–9–2007ರ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಾಡಿಸಿ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ವರ್ಷಗಳ ಅವಧಿಯವರೆಗೆ ತಡೆಹಿಡಿಯಲಾಗಿದೆ ಹಾಗೂ ದಿನಾಂಕ: 14–4–2007 ರಿಂದ 17–8–2007ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 2014**

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎನ್. ನವೀನ್‌ಕುಮಾರ್, ಪೊಲೀಸ್ ಇನ್ಸ್‌ಪೆಕ್ಟರ್, ಸ್ಪೆಷಲ್ ಟಾಸ್ಕ್ ಫೋರ್ಸ್, ಸ್ಪೆಷಲ್ ಎನ್‌ಫೋರ್ಸ್‌ಮೆಂಟ್ ಸೆಲ್, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)43/2009–10 ದಿನಾಂಕ: 23–7–2011

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 30–9–2011

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)43/2009–10 ದಿನಾಂಕ: 15–11–2011

4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 22 ಸಿಎನ್‌ಎಸ್ 2012 ದಿನಾಂಕ: 25–6–2012

**ಪ್ರಸ್ತಾವನೆ:**

ಶ್ರೀ ಎನ್. ನವೀನ್‌ಕುಮಾರ್, ಪೊಲೀಸ್ ಇನ್ಸ್‌ಪೆಕ್ಟರ್, ಇವರು ಈ ಹಿಂದೆ ಬೆಂಗಳೂರಿನ ಕೋರಮಂಗಲ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ದುರ್ನಡತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಎನ್. ನವೀನ್‌ಕುಮಾರ್ ಪೊಲೀಸ್ ಇನ್ಸ್‌ಪೆಕ್ಟರ್ ರವರ ಆದ ನೀವು ಈ ಹಿಂದೆ ಕೋರಮಂಗಲ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಾಖಲಾದ ಮೊಕದ್ದಮೆ ಸಂಖ್ಯೆ:

90/2001 ಕಲಂ 409, 420 ಐಪಿಸಿ ಪ್ರಕರಣದಲ್ಲಿ ತನಿಖೆ ನಡೆಸಿ ಆರೋಪಿಯ ವಿರುದ್ಧ ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿ ಸಲ್ಲಿಸಿರುತ್ತೀರಿ. ಸದರಿ ಪ್ರಕರಣದ ಮುದ್ದೇಮಾಲುಗಳನ್ನು ನ್ಯಾಯಾಲಯಕ್ಕೆ ಒಪ್ಪಿಸುವ ಸಲುವಾಗಿ ಠಾಣೆಯ ಪೂರ್ಣ ಪ್ರಭಾರವನ್ನು ಪ್ರಭಾರಾಧಿಕಾರಿಗಳಿಗೆ ವಹಿಸದೇ ಅತಿಯಾದ ಕರ್ತವ್ಯ ನಿರ್ಲಕ್ಷತೆ, ದುರ್ನಡತೆ ತೋರುವ ಮೂಲಕ ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 23–7–2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷದ ಅವಧಿಗೆ ತಡೆಹಿಡಿಯಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಿದಾಗ ಈ ಘಟನೆಗೆ ಅರ್ಜಿದಾರರನ್ನು ಪೂರ್ಣ ಜವಾಬ್ದಾರರನ್ನಾಗಿ ಮಾಡಿರುವುದು ಸೂಕ್ತವಲ್ಲವೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 110 ಪೊಸಿಅ 2011 ಬೆಂಗಳೂರು, ದಿನಾಂಕ: 10–7–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ನವೀನ್‌ಕುಮಾರ್, ಪೊಲೀಸ್ ಇನ್ಸ್‌ಪೆಕ್ಟರ್, ಸ್ಪೆಷಲ್ ಟಾಸ್ಕ್ ಫೋರ್ಸ್, ಸ್ಪೆಷಲ್ ಎನ್‌ಫೋರ್ಸ್‌ಮೆಂಟ್ ಸೆಲ್, ಬೆಂಗಳೂರು, ಇವರಿಗೆ ಶಿಸ್ತು ಪ್ರಾಧಿಕಾರವು ದಿನಾಂಕ: 23–7–2011ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 2015**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ. ಗೋಪಾಲ್ ಸಿಂಗ್, ಸಿ.ಪಿ.ಸಿ.–35, ರಾಬರ್ಟ್‌ಸನ್ ಪೇಟೆ ಪೊಲೀಸ್ ಠಾಣೆ, ಕೆ.ಜಿ.ಎಫ್., ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್., ಇವರ ಆದೇಶ ಸಂಖ್ಯೆ: ಸಿಬ್ಬಂದಿ–1/ಶಿಕ್ಷೆ/06/2007 (ಓ.ಬಿ. ಸಂಖ್ಯೆ: 20/2009) ದಿನಾಂಕ: 19–01–2009 ಮತ್ತು 28–5–2010

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/07/ ಫನ್ಸಿ/2009 (ಓ.ಬಿ. ಸಂಖ್ಯೆ: 44/2009–10) ದಿನಾಂಕ: 25–7–2009 ಮತ್ತು ದಿನಾಂಕ: 20–9–2010

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 05–01–2011

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/85/2010–11 ದಿನಾಂಕ: 12–4–11

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 208 ಸಿಎನ್‌ಎಸ್ 2011 ದಿನಾಂಕ: 25–6–2012

**ಪ್ರಸ್ತಾವನೆ:**

ಶ್ರೀ ಬಿ. ಗೋಪಾಲ್ ಸಿಂಗ್, ಸಿ.ಪಿ.ಸಿ. ಇವರು ಕೆ.ಜಿ.ಎಫ್.ನ ಚಾಂಪಿಯನ್ ರೀಫ್ಸ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಗೋಪಾಲ್‌ಸಿಂಗ್, ಆದ ನೀವು ಸಿ.ಪಿ.ಸಿ. 182 ಆಗಿ ಕೆ.ಜಿ.ಎಫ್. ಚಾಂಪಿಯನ್ ರೀಪ್ಸ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಉರಿಗಾಂ ಅಂಚೆ ಕಛೇರಿ ಬಳಿ ಇರುವ ಬಿ.ಜಿ.ಎಂ.ಎಲ್. ಸಂಸ್ಥೆಗೆ ಸೇರಿದ ಬಂಗಲೆ ಸಂಖ್ಯೆ: 103/ಸಿ ಗೆ ಅನಧಿಕೃತವಾಗಿ ಪ್ರವೇಶ ಮಾಡಿ ಪೀಠೋಪಕರಣಗಳನ್ನು ಇಟ್ಟು ಕುಟುಂಬದವರೊಂದಿಗೆ ವಾಸವಿರಲು ಕಾರಣರಾಗಿ ಅಶಿಸ್ತು ಹಾಗೂ ದುರ್ನಡತೆಯನ್ನು ತೋರ್ಪಡಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್., ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 19–01–2009ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ ದಿನಾಂಕ: 24.07.07 ರಿಂದ 05.02.2008 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಶಿಸ್ತು ಪ್ರಾಧಿಕಾರದಿಂದ ಆದೇಶವಾಗಿರುವ ಇಲಾಖಾ ವಿಚಾರಣೆಯು ದೋಷಾಪೂರಿತವಾಗಿದ್ದು, ನಿಯಮಿತ ಕಾರ್ಯ ವಿಧಾನವನ್ನು ಅನುಸರಿಸಿ ವಿಚಾರಣೆಯನ್ನು ನಡೆಸದಿರುವುದರಿಂದ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಕಾಯ್ದಿರಿಸಿ, ಶಿಸ್ತು ಪ್ರಾಧಿಕಾರವು ಆದೇಶಿಸಿದ ಇಲಾಖಾ ವಿಚಾರಣೆಯನ್ನು ರದ್ದುಪಡಿಸಿ, ಇಲಾಖಾ ವಿಚಾರಣಾಧಿಕಾರಿಗಳನ್ನು ನೇಮಿಸಿ, ಆ.ಪೊ.ಅ. ರವರ ಮೇಲಿರುವ ಆರೋಪದ ಮೇಲೆ ನಿರ್ದಿಷ್ಟವಾದ ದೋಷಾರೋಪಣೆಯನ್ನು ಹೊರಡಿಸುವ ಹಂತದಿಂದ ಪ್ರಾರಂಭಿಸಿ, ಮರು ವಿಚಾರಣೆಗೆ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 25–07–2009ರಲ್ಲಿ ಆದೇಶಿಸಿದ್ದಾರೆ. ಅದರಂತೆ ಮರು ಇಲಾಖಾ ವಿಚಾರಣೆಯನ್ನು ನಡೆಸಿದ್ದು ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ನೀಡಿದ್ದಾರೆ. ಆದರೆ ಶಿಸ್ತು ಪ್ರಾಧಿಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪದೆ ಆ.ಪೊ.ಅ. ರವರ ವಿರುದ್ದದ ಆರೋಪಗಳು ಧೃಡಪಟ್ಟಿದೆ ಎಂದು ತೀರ್ಮಾನಿಸಿ ಆ.ಪೊ.ಅ. ರವರ ಸಮಜಾಯಿಷಿಯನ್ನು ಪಡೆದು, ಅದನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್. ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 28–5–2010ರ ಆದೇಶದಲ್ಲಿ ದಿನಾಂಕ: 19–01–09ರ ದಂಡನಾದೇಶವನ್ನು ಹಿಂಪಡೆದು ಮತ್ತು ಶ್ರೀ ಬಿ. ಗೋಪಾಲ್‌ಸಿಂಗ್, ಸಿ.ಪಿ.ಸಿ., ಇವರನ್ನು ದಿ: 23–01–09 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಈ ದಂಡನಾದೇಶದ ವಿರುದ್ದ ಮೇಲ್ಮನವಿ ಸಲ್ಲಿಸಿದ್ದು, ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಓದಲಾದ (2)ರ ದಿನಾಂಕ: 20–9–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ, ದಿನಾಂಕ: 23–01–2009 ರಿಂದ ಕರ್ತವ್ಯಕ್ಕೆ ಪುನರ್ ಹಾಜರಾಗುವ ದಿನಾಂಕದವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು ಪರಿಗಣಿಸಿ ಇವರ ವೇತನವನ್ನು ಸಿ.ಪಿ.ಸಿ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಇಳಿಸಿ ಆರಂಭದಿಂದ ಕಾಲಿಕ ವೇತನ ಶ್ರೇಣಿಯ ಬಡ್ತಿಯನ್ನು ಪಡೆಯುವುದು ಹಾಗೂ ದಿನಾಂಕ: 24–07–07 ರಿಂದ 05–02–08 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತಂದೆ ಪರಿಗಣಿಸಲಾಗಿದೆ.

ಮೇಲಿನ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿದ ಮೇಲ್ಮನವಿ ಪ್ರಾಧಿಕಾರದ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಶಾಶ್ವತವಾಗಿ ಇಳಿಸಿದ್ದು, ಇದು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 59(ಬಿ)ಗೆ ವ್ಯತಿರಿಕ್ತವಾಗಿದ್ದು, ಈ ಅಂಶಕ್ಕೆ ಸೀಮಿತಗೊಳಿಸಿ ಮೇಲ್ಮನವಿ ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 3 ಪೊಸಿಅ 2011 ಬೆಂಗಳೂರು, ದಿನಾಂಕ: 10–7–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೇಲ್ಮನವಿ ಪ್ರಾಧಿಕಾರದ ದಿನಾಂಕ: 20–9–2010ರ ಆದೇಶವನ್ನು ಭಾಗಶಃ ಮಾರ್ಪಡಿಸಿ ಶ್ರೀ ಬಿ. ಗೋಪಾಲ್ ಸಿಂಗ್, ಸಿ.ಪಿ.ಸಿ.–35, ರಾಬರ್ಟ್‌ಸನ್ ಪೇಟೆ ಪೊಲೀಸ್ ಠಾಣೆ, ಕೆ.ಜಿ.ಎಫ್., ಇವರ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ಹಂತಕ್ಕೆ ಎರಡು ವರ್ಷಗಳ ಅವಧಿಯವರೆಗೆ ಸಂಚಿತ ಪರಿಣಾಮ ಬೀರುವಂತೆ ಇಳಿಸಿ, ಇವರು ಸೇವೆಯಿಂದ ವಜಾಗೊಂಡು ಪುನರ್ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾಗುವ ದಿನದವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು ಹಾಗೂ ದಿನಾಂಕ: 24–7–2007 ರಿಂದ 05–02–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್. 2016**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:–** ಶ್ರೀ ಟಿ.ಕೆ. ರಾಣೋಜಿರಾವ್, ಜಂಟಿ ನಿರ್ದೇಶಕರು, ಜಿಕೈಕೇ, ಬಿಜಾಪುರ, ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಆದೇಶ.

**ಓದಲಾಗಿದೆ:–**
1. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ: ಕೈವಾಇ/ನಿರೀಕ್ಷಣೆ–2/83/2004–05, ದಿನಾಂಕ: 14.10.2009.
2. ಸರ್ಕಾರದ ಕಾರಣ ಕೇಳುವ ನೋಟೀಸ್ ದಿ: 05.01.2010.
3. ಸರ್ಕಾರಿ ಆದೇಶ ಸಂಖ್ಯೆ: ವಾಕೈ 357 ಕೈಸೇವಿ 2008, ದಿ:20.09.2010.
4. ಶ್ರೀ ಎಸ್.ಸಿ. ಇಂಗಳಗಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಮನವಿ ದಿ:30.12.2011.
5. ಸರ್ಕಾರಿ ಆದೇಶ ಸಂಖ್ಯೆ: ವಾಕೈ 357 ಕೈಸೇವಿ 2008, ದಿನಾಂಕ: 03.02.2012.
6. ಶ್ರೀ ಸಿ.ಆರ್.ಜಾವೀದ್ ಪಾಷಾ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಮನವಿ ದಿ: 05.03.2012.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಶ್ರೀ ಟಿ.ಕೆ. ರಾಣೋಜಿರಾವ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ, ರವರು ಸಹಾಯ ಧನ ಬಿಡುಗಡೆ ಮಾಡುವ ಬಗ್ಗೆ ಕೈಗಾರಿಕೋದ್ಯಮಿಗಳಿಗೆ ಕಿರುಕುಳ ನೀಡುತ್ತಿರುವ ಸಂಬಂಧ ಕೈಗಾರಿಕೋದ್ಯಮಿಗಳು ಮನವಿಗಳನ್ನು ಸಲ್ಲಿಸಿ ಕ್ರಮ ಕೈಗೊಳ್ಳಲು ಕೋರಿರುತ್ತಾರೆ ಎಂಬುದಾಗಿ ತಿಳಿಸಿರುತ್ತಾರೆ. ಮುಂದುವರೆದಂತೆ ಸರ್ಕಾರದ ಪತ್ರದ ಸಂಖ್ಯೆ: ವಾಕೈ 257 ಕೈಸೇವಿ 2008, ದಿ:08.12.2008 ರಲ್ಲಿ ಶ್ರೀ ಟಿ.ಕೆ. ರಾಣೋಜಿರಾವ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ, ಇವರ ವಿರುದ್ಧ ಭ್ರಷ್ಟಾಚಾರ ಮತ್ತು ಅವ್ಯವಹಾರದ ಆಪಾದನೆಗಳ ಬಗ್ಗೆ ತನಿಖಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು.

ಈ ಹಿನ್ನಲೆಯಲ್ಲಿ ಅಪರ ನಿರ್ದೇಶಕರು, (ಜಿ.ಕೈ.ಕೇ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರು ದಿ: 12.03.2009 ರಂದು ಅಧಿಕಾರಿಗಳ ಕಛೇರಿಗೆ ಭೇಟಿ ನೀಡಿ ವಿವಿಧ ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆಯನ್ನು ಮುಖ್ಯವಾಗಿ ಸಹಾಯಧನ ಮಂಜೂರಾತಿ ಬಗ್ಗೆ ಪರಿಶೀಲಿಸಿ ವರದಿಯನ್ನು ನೀಡಿರುತ್ತಾರೆ. ವರದಿಯ ಆಧಾರದ ಮೇಲೆ ಆಯುಕ್ತರು ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರು ಶ್ರೀ ಟಿ.ಕೆ. ರಾಣೋಜಿರಾವ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ, ರವರಿಗೆ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಿ ಸಮಜಾಯಿಷಿಯನ್ನು ನೀಡಲು ಸೂಚಿಸಲಾಗಿತ್ತು. ಜಂಟಿ ನಿರ್ದೇಶಕರು ನೀಡಿರುವ ಸಮಾಜಾಯಿಷಿಯು ಸಮಂಜಸವಾಗಿ ಇಲ್ಲದೇ ಇರುವುದರಿಂದ ಸದರಿಯವರ ಮೇಲೆ ವಿಚಾರಣೆ ನಡೆಸಲು ತೀರ್ಮಾನಿಸಲಾಗಿದೆ. ಮೇಲಿನ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸದರಿ ಅಧಿಕಾರಿಯವರ ಮೇಲೆ ವಿಚಾರಣೆ ನಡೆಸಲು ಅನುಬಂಧ 1 ರಿಂದ 4ರ ದೋಷಾರೋಪಣಾ ಪಟ್ಟಿಯನ್ನು ಹಾಗೂ ಸಂಬಂಧಿಸಿದ ದಾಖಲಾತಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2) ರ ನೋಟೀಸ್‌ನಲ್ಲಿ ಶ್ರೀ ಟಿ.ಕೆ. ರಾಣೋಜಿರಾವ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ನಿರ್ಲಕ್ಷತನ ತೋರಿರುವುದು, ಸಹಾಯಧನ ಮಂಜೂರಾತಿ ಮತ್ತು ಬಿಡುಗಡೆ ಬಗ್ಗೆ ಯಾವುದೇ

ಕ್ರಮ ಕೈಗೊಳ್ಳದೇ ಇರುವುದು; ಸರ್ಕಾರದ ಆದೇಶಗಳನ್ನು ಪಾಲಿಸದೇ ಕರ್ತವ್ಯ ಚ್ಯುತಿ ಎಸಗಿರುವುದು: ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು; ಕೆಲವೊಂದು ವಿಷಯಗಳಲ್ಲಿ ತಮ್ಮ ಹಂತದಲ್ಲಿಯೇ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಿದ್ದರೂ ಸಹ ಅನಾವಶ್ಯಕವಾಗಿ ಕೇಂದ್ರ ಕಛೇರಿಗೆ ಪತ್ರ ವ್ಯವಹಾರ ಮಾಡಿ ವಿನಾಕಾರಣ ಗೊಂದಲ ಉಂಟು ಮಾಡಿರುವುದು ಕೈಗಾರಿಕೋದ್ಯಮಿಗಳಿಗೆ ಅನಾವಶ್ಯಕವಾಗಿ ತೊಂದರೆ ನೀಡಿ ಗೊಂದಲಕ್ಕೆ ಅನುವು ಮಾಡಿಕೊಟ್ಟಿರುವುದು; ಸಕಾಲದಲ್ಲಿ ಕಾರ್ಯನಿರ್ವಹಿಸಲು ವಿಫಲರಾಗಿರುವುದು; ಕೈಗಾರಿಕಾಭಿವೃದ್ಧಿಗೆ ಶ್ರಮಿಸದೇ ಇರುವುದು, ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿ ಶಿಸ್ತು ಕ್ರಮ ಕೈಗೊಳ್ಳಲು ಆರೋಪಗಳಿಗೆ ಸಂಬಂಧಿಸಿದಂತೆ ದೋಷಾರೋಪಣಾ ಪಟ್ಟಿ ಅನುಬಂಧ 1 ರಿಂದ 4ನ್ನು ಕಳುಹಿಸಿ ಈ ನೋಟೀಸ್‌ಗೆ ಲಿಖಿತ ರೂಪದಲ್ಲಿ ಹೇಳಿಕೆ ಸಲ್ಲಿಸುವಂತೆ, ಸಲ್ಲಿಸದಿದ್ದರೆ ಆರೋಪಗಳ ಬಗ್ಗೆ ಸದರಿಯವರ ಪ್ರತಿವಾದವೇನು ಇಲ್ಲವೆಂದು ಭಾವಿಸಿ ಕರ್ನಾಟಕ ನಾಗರೀಕಾ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ಅನ್ವಯ ಸದರಿಯವರ ಮೇಲೆ ಶಿಸ್ತು ಕ್ರಮ ತೆಗೆದುಕೊಳ್ಳಬೇಕಾಗುತ್ತದೆ ಎಂದು ತಿಳಿಸಲಾಗಿತ್ತು.

ಆದಾಗ್ಯೂ, ಸದರಿ ಅಧಿಕಾರಿಯವರು ಸರ್ಕಾರದ ಕಾರಣ ಕೇಳುವ ನೋಟೀಸ್‌ಗೆ ಇದುವರೆವಿಗೂ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಇದನ್ನು ಸರ್ಕಾರದಲ್ಲಿ ಗಂಭೀರವಾಗಿ ಪರಿಗಣಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ:3ರ ಆದೇಶದಲ್ಲಿ ಸದರಿ ಪ್ರಕರಣದಲ್ಲಿ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯಾಗಿ ಶ್ರೀ ಬಿ.ಎಂ. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 239/1, ನಾಗಶ್ರೀ ನಿಲಯ, ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು, ಇವರನ್ನು ನೇಮಿಸಲಾಗಿತ್ತು. ಶ್ರೀಯುತರು ನಿಧನ ಹೊಂದಿರುವುದರಿಂದ ಇವರ ಬದಲಿಗೆ ಶ್ರೀ ಎಸ್.ಸಿ. ಇಂಗಳಗಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 403, 6 ಬಿ ಕ್ರಾಸ್, 18ನೇ ಮುಖ್ಯ ರಸ್ತೆ, 6ನೇ ಬ್ಲಾಕ್, ಕೋರಮಂಗಲ, ಬೆಂಗಳೂರು 560 095, ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ:4ರ ಮನವಿಯಲ್ಲಿ ಶ್ರೀ ಎಸ್.ಸಿ. ಇಂಗಳಗಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಕೆಲಸದ ಒತ್ತಡದಿಂದ ಬೇರೆಯವರನ್ನು ನೇಮಿಸಿಕೊಳ್ಳಬೇಕೆಂದು ಕೋರಿದ್ದರಿಂದ ಆದೇಶ ಸಂಖ್ಯೆ; ವಾಕೈ 257 ಕೈಸೇವಿ 2008, ದಿ:16.12.2011 ರಲ್ಲಿ ವಿಚಾರಣಾಧಿಕಾರಿಯಾಗಿ ನೇಮಿಸಿರುವುದನ್ನು ರದ್ದುಪಡಿಸಿ ಇವರ ಬದಲಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ 5 ರ ಆದೇಶದಲ್ಲಿ ಶ್ರೀ ಸಿ.ಆರ್.ಜಾವೀದ್ ಪಾಷಾ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ನೇಮಕ ಮಾಡಿ ಆದೇಶ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (6) ರ ಮನವಿಯಲ್ಲಿ ಶ್ರೀ ಸಿ.ಆರ್.ಜಾವೀದ್ ಪಾಷಾ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರು ಕೆಲಸದ ಒತ್ತಡದಿಂದ ಬೇರೆಯವರನ್ನು ನೇಮಿಸಿಕೊಳ್ಳಬೇಕೆಂದು ಕೋರಿರುವುದರಿಂದ ಇವರ ಬದಲಾಗಿ ಶ್ರೀ ಎನ್.ನಾರಾಯಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ನಂ. 226,3 "ಇ" ಕ್ರಾಸ್, 3ನೇ ಮುಖ್ಯ ರಸ್ತೆ, 3ನೇ ಬ್ಲಾಕ್, ಕಲ್ಯಾಣ ನಗರ, ಬೆಂಗಳೂರು–560043 ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯಾಗಿ ನೇಮಿಸಲು ಉದ್ಧೇಶಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ; ವಾಕೈ 257 ಕೈಸೇವಿ 2008, ಬೆಂಗಳೂರು ದಿ:13.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಟಿ.ಕೆ. ರಾಣೋಜಿರಾವ್, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿನ ಕರ್ತವ್ಯ ಲೋಪಗಳಿಗೆ ಸಂಬಂಧಿಸಿದಂತೆ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಸಿ.ಆರ್. ಜವೀದ್ ಪಾಶಾ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ.1714/ಎ, 41ನೇ ಕ್ರಾಸ್, ಈಸ್ಟ್ ಎಂಡ್ ಬಿ ಮುಖ್ಯ ರಸ್ತೆ, ಸಹಕಾರಿ ವಿದ್ಯಾ ಕೇಂದ್ರ ಹೈಸ್ಕೂಲ್ ಎದುರು, ಜಯನಗರ, 9ನೇ ಬ್ಲಾಕ್, ಬೆಂಗಳೂರು–560069 ಇವರ ಬದಲಿಗೆ ಶ್ರೀ ಎನ್. ನಾರಾಯಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ನಂ.226,3 "ಇ" ಕ್ರಾಸ್, 3ನೇ ಮುಖ್ಯ ರಸ್ತೆ, 3ನೇ ಬ್ಲಾಕ್, ಕಲ್ಯಾಣ ನಗರ, ಬೆಂಗಳೂರು–560043 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಶ್ರೀ ವಿ. ಲೋಕೇಶ್, ಉಪ ನಿರ್ದೇಶಕರು (ಆಡಳಿತ), ಕೇಂದ್ರ ಕಛೇರಿ, ಬೆಂಗಳೂರು, ಇವರನ್ನು ಅಥವ ಇವರ ಸ್ಥಾನದಲ್ಲಿ ವರ್ಗಾವಣೆಗೊಂಡು ಕರ್ತವ್ಯ ನಿರ್ವಹಿಸುವ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕಾಭಿವೃದ್ಧಿ ಆಯುಕ್ತರ ಕಛೇರಿಯಲ್ಲಿ ಅಥವಾ ಅವರು ಗುರುತಿಸಿ, ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಶೀಘ್ರಲಿಪಿಗಾರರು/ ಬೆರಳಚ್ಚುಗಾರರ ಸೇವೆಯನ್ನು ಒದಗಿಸಲು ಮತ್ತು ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಒದಗಿಸಲು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನಿರ್ದೇಶನಾಲಯಕ್ಕೆ ಸೂಚಿಸಿದೆ.

ವಿಚಾರಣಾ ವರದಿಯನ್ನು 3 ತಿಂಗಳ ಅವಧಿಯೊಳಗೆ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಆದೇಶಿಸಿದೆ. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಸೇಇವಿ 2010, ದಿ:28.04.2011 ರನ್ವಯ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯು ಸಂಭಾವನೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ಪಿ.ಆರ್. 1994**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಎನ್.ಚೇತನ್, ವಾಹನ ಚಾಲಕರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಮಾನ್ಯ 2ನೇ ಉಪ ಲೋಕಾಯುಕ್ತರ ವಾಹನ ಚಾಲಕರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವುದರ ಷರತ್ತು ಮತ್ತು ನಿಬಂಧನೆಗಳು.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 39 ಸೇಲೋಯು 2012, ಬೆಂಗಳೂರು, ದಿನಾಂಕ: 09–08–2012**

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 39 ಸೇಲೋಯು 2012 ದಿನಾಂಕ: 07.03.2012

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 07.03.2012 ರ ಆದೇಶದಲ್ಲಿ ಶ್ರೀ ಕೆ.ಎನ್.ಚೇತನ್, ವಾಹನ ಚಾಲಕರು ಇವರನ್ನು ದಿನಾಂಕ: 22.01.2012 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಮಾನ್ಯ 2ನೇ ಉಪ ಲೋಕಾಯುಕ್ತರ ವಾಹನ ಚಾಲಕರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಲಾಗಿದ್ದು ಇವರ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿರುವ ಮಾನ್ಯ 2ನೇ ಉಪ ಲೋಕಾಯುಕ್ತರ ವಾಹನ ಚಾಲಕರ ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇಲೆ ದಿನಾಂಕ 22.01.2012 ರಿಂದ 04.04.2012 ರವರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಕೆ.ಎನ್.ಚೇತನ್, ವಾಹನ ಚಾಲಕರು ಇವರ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತಿರುತ್ತವೆ:

1. ಶ್ರೀ ಕೆ.ಎನ್.ಚೇತನ್ ರವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ 22.01.2012 ರಿಂದ ಒಂದು ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.

2. ಶ್ರೀ ಕೆ.ಎನ್.ಚೇತನ್ ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ.5,800/– (ಐದು ಸಾವಿರದ ಎಂಟುನೂರು ರೂಪಾಯಿಗಳು) ಸಂಚಿತ ವೇತನವನ್ನು ನಿಗಧಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೆ ಇವರು ಅರ್ಹರಾಗಿರುವುದಿಲ್ಲ.

3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

4. ಸದರಿ ಗುತ್ತಿಗೆ ನೌಕರರು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.

5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.

6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರುಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್–ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.

9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸಲಾಗುವುದಿಲ್ಲ.

10. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.

11. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.

12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.

13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

14. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಆರ್ಥಿಕ ನಷ್ಟವಾದಲ್ಲಿ ಅದನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.

15. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ.50–00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ಅಧಿಕಾರಿಯವರಿಂದ ಬರೆಯಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 138 ಸೇ–3/12 ದಿನಾಂಕ: 13.02.2012 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಡಿ.ನಾಗೇಶ್ ಪಾಟಕ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು).

**ಪಿ.ಆರ್. 1901**

## ಒಳಾಡಳಿತ ಸಚಿವಾಲಯ

**ವಿಷಯ:** 2011–12ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಿರುವ ಅನುದಾನವನ್ನು ಬಿಡುಗಡೆ ಮಾಡುವ ಕುರಿತು

**ಓದಲಾಗಿದೆ:–**
1. ನಿರ್ದೇಶಕರು (ಪಿಎಂಆರ್), ಗೃಹ ಮಂತ್ರಾಲಯ (Anti Human Trafficking Cell) ಕೇಂದ್ರ ಸರ್ಕಾರ, ನವದೆಹಲಿ, ರವರ ಪತ್ರ ಸಂಖ್ಯೆ: VI–21011/36/2010–PM-I-CR ದಿನಾಂಕ 29–12–2011
2. ಸರ್ಕಾರದ ಪತ್ರ ಸಂಖ್ಯೆ: ಒಇ 125 ಪಿಸಿಸಿ 2008, ದಿನಾಂಕ 20–01–2012
3. ಪೊಲೀಸ್ ಮಹಾ ನಿರ್ದೇಶಕರು ಸಿಐಡಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: 1/ಎಂಓಡಿ/ಎಹೆಚ್‌ಟಿಸಿ/ಸಿಐಡಿ/2010, ದಿನಾಂಕ 10–02–2012

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ದಿನಾಂಕ 29–12–2011 ರ ನಿರ್ದೇಶಕರು (ಪಿಎಂಆರ್), ಗೃಹ ಮಂತ್ರಾಲಯ (Anti Human Trafficking Cell) ಕೇಂದ್ರ ಸರ್ಕಾರ, ನವದೆಹಲಿ, ರವರ ಪತ್ರದಲ್ಲಿ ಕರ್ನಾಟಕ ರಾಜ್ಯದಲ್ಲಿ 2011–12ನೇ ಸಾಲಿಗೆ ಮಾನವ ಸಾಗಾಣಿಕೆ ನಿಷೇಧ ಘಟಕ (Anti Human Trafficking Unit) ಗಳನ್ನು ಸ್ಥಾಪಿಸಲು ರೂ.30,32,000/– ಗಳ ಅನುಧಾನವನ್ನು ಬಿಡುಗಡೆ ಮಾಡಿ ಮಂಜೂರಾತಿ ನೀಡಿದೆ.

ಮೇಲೆ ಓದಲಾದ (2) ರ ಸರ್ಕಾರದ ಪತ್ರ ದಿನಾಂಕ 20–01–2012 ರಲ್ಲಿ ಪೊಲೀಸ್ ಮಹಾ ನಿರ್ದೇಶಕರು ಸಿಐಡಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು, ಇವರನ್ನು 2011–12ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಿರುವ ಅನುದಾನವನ್ನು ಬಿಡುಗಡೆ ಮಾಡುವುದಕ್ಕೆ ಸಂಬಂಧಿಸಿದಂತೆ ಪ್ರಸ್ತಾವನೆಯನ್ನು ಕಳುಹಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ (3) ರ ಪೊಲೀಸ್ ಮಹಾ ನಿರ್ದೇಶಕರು ಸಿಐಡಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು, ಇವರ ದಿನಾಂಕ 10–02–2012 ರ ಪತ್ರದಲ್ಲಿ ಪೊಲೀಸ್ ಇಲಾಖೆಗೆ ಮಾನವ ಸಾಗಾಣಿಕೆ ನಿಷೇದ ಘಟಕಗಳನ್ನು ಸ್ಥಾಪಿಸುವ ಸಲುವಾಗಿ ಸರ್ಕಾರದಿಂದ ಈಗಾಗಲೇ ಪೊಲೀಸ್ ಇಲಾಖೆಯಲ್ಲಿ ಬೆಂಗಳೂರು ನಗರ, ಮೈಸೂರು ಜಿಲ್ಲೆ, ಹುಬ್ಬಳ್ಳಿ–ಧಾರವಾಡ, ಬೆಳಗಾಂ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಒಟ್ಟು ಐದು ಮಾನವ ಸಾಗಾಣಿಕೆ ನಿಷೇದ ದಳಗಳನ್ನು ಸ್ಥಾಪಿಸಿದ್ದು, ಇವು ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿವೆ. ಇಲಾಖೆಯಲ್ಲಿ ಇನ್ನು ನಾಲ್ಕು ಮಾನವ ಸಾಗಾಣಿಕೆ ನಿಷೇದ ಘಟಕಗಳನ್ನು ಸ್ಥಾಪಿಸಿಬೇಕಾದಲ್ಲಿ, ಪ್ರತಿಯೊಂದು ಘಟಕದ ಕಛೇರಿಗೆ ಬೇಕಾದ ಸ್ಥಳವಕಾಶ ಸಿಬ್ಬಂದಿಗಳು ಅಂದರೆ 1) ಪೊಲೀಸ್ ನಿರೀಕ್ಷಕರು– 1 ಹುದ್ದೆ 2) ಪಿ.ಎಸ್.ಐ – 2 ಹುದ್ದೆಗಳು 3) ಮುಖ್ಯ ಆರಕ್ಷಕರು – 2 ಹುದ್ದೆ 4) ಪೊಲೀಸ್ ಆರಕ್ಷಕರು – 2 ಹುದ್ದೆಗಳನ್ನು ನಿಯೋಜಿಸುವ ಅವಶ್ಯಕತೆ ಇರುತ್ತದೆ ಮತ್ತು ಕಛೇರಿಗೆ ಅವಶ್ಯವಾದ ಪೀಠೋಪಕರಣಗಳು, ವಾಹನ, ಸಂಚಾರಿ ದೂರವಾಣಿ, ಸ್ಥಿರ ದೂರವಾಣಿ, ಗಣಕಯಂತ್ರ, ಕಾನೂನಿಗೆ ಸಂಬಂಧಿಸಿದ ಪುಸ್ತಕಗಳು ಹಾಗೂ ಮಾನವ ಸಾಗಾಣಿಕೆ ನಿಷೇದ ಘಟಕಗಳನ್ನು ಸ್ಥಾಪಿಸುವುದರ ಜೊತೆಗೆ ಮಹಿಳೆ ಮತ್ತು ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಸಾಗಾಣಿಕೆದಾರರಿಂದ ರಕ್ಷಿಸಿದ ನಂತರ ಅವರುಗಳ ಪುನರ್ ವಸತಿಗಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕಾರ್ಮಿಕ ಮತ್ತು ಉದ್ಯೋಗ ಇಲಾಖೆ, ಅಭಿಯೋಜನೆ ಇಲಾಖೆ ಮತ್ತು ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳನ್ನು ಸಹ ಸೇರ್ಪಡೆಗೊಳಿಸುವುದು ಅತ್ಯವಶ್ಯಕವಾಗಿರುತ್ತದೆಂದು ಅಲ್ಲದೇ ರಾಜ್ಯದ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಮಾನವ ಸಾಗಾಣಿಕೆ ಸಮಸ್ಯೆಯು ಹೆಚ್ಚಾಗಿರುವುದರಿಂದ ಗುಲಬರ್ಗಾ ಪೊಲೀಸ್ ವಲಯಕ್ಕೆ ಎರಡು ಮಾನವ ಸಾಗಾಣಿಕೆ ನಿಷೇದ ಘಟಕಗಳನ್ನು ಪ್ರಸ್ತಾಪಿಸಿದ್ದು, ಇದರಿಂದ ರಾಜ್ಯದ ಎಲ್ಲೆಡೆ ಮಾನವ ಸಾಗಾಣಿಕೆಯನ್ನು ಯಶಸ್ವಿಯಾಗಿ ತಡೆಗಟ್ಟಲು ಅಗತ್ಯ ಕ್ರಮಕೈಗೊಳ್ಳಲು ಸಾಧ್ಯವಾಗುತ್ತದೆ ಎಂದು ಪ್ರಸ್ತಾಪಿಸಿರುವರು.

ಮೇಲಿನ ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 125 ಪಿಸಿಸಿ 2008, ಬೆಂಗಳೂರು, ದಿನಾಂಕ: 22–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕೇಂದ್ರ ಸರ್ಕಾರವು ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಗೆ 2011–12ನೇ ಸಾಲಿಗೆ ವಿಶೇಷವಾಗಿ ಉತ್ತರ ಕರ್ನಾಟಕದ ಗುಲಬರ್ಗಾ, ರಾಯಚೂರು ಜಿಲ್ಲೆಗಳಲ್ಲಿ ಹಾಗೂ ದಾವಣಗೆರೆ ಜಿಲ್ಲೆ ಮತ್ತು ಕೋಲಾರ ಜಿಲ್ಲೆಯಲ್ಲಿ ಪೊಲೀಸ್ ಇಲಾಖೆಯ 4 ಘಟಕಗಳಲ್ಲಿ ಮಾನವ ಸಾಗಾಣಿಕೆ ನಿಷೇಧ ಘಟಕ (Anti Human Trafficking Unit) ಗಳನ್ನು ರಚಿಸಲು ಕ್ರಮಾಂಕ (1) ರಲ್ಲಿ ಓದಲಾದ ಪತ್ರದನ್ವಯ ಬಿಡುಗಡೆ ಮಾಡಿರುವ ಅನುದಾನ ಹಣ ರೂ. 30,32,000/– ಗಳನ್ನು (ಮೂವತ್ತು ಲಕ್ಷದ ಮೂವತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಅನುಬಂಧದಲ್ಲಿ ತೋರಿಸಿರುವಂತೆ ಕೇಂದ್ರ ಸರ್ಕಾರವು ಅನುಮೋದನೆ ನೀಡಿರುವ ಕ್ರಿಯಾ ಯೋಜನೆಯನ್ವಯ ಉಪಯೋಗಿಸಿಕೊಳ್ಳಲು ಪೊಲೀಸ್ ಇಲಾಖೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮಂದುವರೆದು ದಿನಾಂಕ 25–11–2006ರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 134 ಶಿವಾನೀ 2006ರಲ್ಲಿ ನಾಮನಿರ್ದೇಶಿತ ವಾಹನ ಹೊಂದಲು ಅರ್ಹರಿರುವ ಇಲಾಖಾ ಮುಖ್ಯಸ್ಥರುಗಳಿಗೆ ಮತ್ತು ದಿನಾಂಕ:12–05–2008ರ ಅನಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 174 ಶಿವಾನೀ 2007 ರಲ್ಲಿ ನಿಗದಿಪಡಿಸಿದ ಆರ್ಥಿಕ ಮಿತಿಯಲ್ಲಿ ಹಾಗೂ ಸರ್ಕಾರವು ಆಗಿಂದಾಗ್ಗೆ ಹೊರಡಿಸಿರುವ ನಿಯಮಗಳನ್ವಯ ವಾಹನಗಳನ್ನು ಖರೀದಿಸತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ "2055–00–115–0–00 ಪೊಲೀಸ್ ಆಧುನೀಕರಣ ಇದರಡಿಯಲ್ಲಿ ಒದಗಿಸಿದ ಅನುದಾನವನ್ನು ಭರಿಸತಕ್ಕದ್ದು ಹಾಗು ನಂತರ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ credit confirmation slip for 2011–12 ರಡಿಯಲ್ಲಿ ಟಿಪ್ಪಣಿ ಸಂಖ್ಯೆ: ಆಇ 13 ಬಿಜಿಎಲ್ 2009 ದಿನಾಂಕ:04–01–2012 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ.ಹಿರೇಮಠ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಅಪರಾಧಗಳು)

**ಪಿ.ಆರ್. 1974**

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2012ಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** (1) ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೈವಾಇ/ಎಇಪಿ/ಎ1/ಜಿಮ್–2012/10/2012–13, ದಿನಾಂಕ: 15.06.2012.

(**2**) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಉಮಿ/ಎ1/ 07/2011–12, ದಿನಾಂಕ: 01.06.2012.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು 2012–13ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ "2852–80–102–0–02 (125) ರ ಮೂಲಭೂತ ಸೌಕರ್ಯ ಮತ್ತು ವ್ಯಾಪಾರ ಉತ್ತೇಜನ ಆಧುನೀಕರಣ" ಯೋಜನೆಯಡಿಯಲ್ಲಿ ಒಟ್ಟು ರೂ. 3200.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದ್ದು, ಈ ಯೋಜನೆಯ ಉಪ ಯೋಜನೆಯಡಿ ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಗೆ ರೂ. 2400.00 ಲಕ್ಷಗಳ ಅನುದಾನ ನಿಗದಿಪಡಿಸಲಾಗಿದೆ. ಪ್ರಸಕ್ತ ಸಾಲಿನ 7 ಮತ್ತು 8 ಜೂನ್, 2012 ರಂದು ನಡೆದ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ–2012ಕ್ಕೆ ರೂ. 1500.00 ಬಿಡುಗಡೆ ಮಾಡಬೇಕೆಂದು ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ, ಪ್ರಸಕ್ತ ಸಾಲಿನಲ್ಲಿ ಮೊದಲನೇ ತ್ರೈಮಾಸಿಕದಲ್ಲಿ ಶೇ. 25 ರಷ್ಟನ್ನು ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಗೆ ಪ್ರಸ್ತುತ ಸಾಲಿನಲ್ಲಿ ಹಂಚಿಕೆ ಮಾಡಿರುವ ಅನುದಾನದಿಂದ ಮೊದಲನೇ ಕಂತು ರೂ. 800.00 ಲಕ್ಷಗಳಿಂದ ಶಿಫಾರಸ್ಸು ಮಾಡಿ ತಡೆಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 22 ಎಸ್‌ಪಿಐ 2011(ಪಿ), ಬೆಂಗಳೂರು, ದಿನಾಂಕ: 20.06.2012**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, 2012–13ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ "2852–80–102–0–02 (125) ರ ಮೂಲಭೂತ ಸೌಕರ್ಯ ಮತ್ತು ವ್ಯಾಪಾರ ಉತ್ತೇಜನ ಆಧುನೀಕರಣ" ಯೋಜನೆಯಡಿಯಲ್ಲಿ ಮೆ: ಕರ್ನಾಟಕ ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಸಂಸ್ಥೆಗೆ ರೂ. 800.00 ಲಕ್ಷಗಳನ್ನು (ಎಂಟು ನೂರು ಲಕ್ಷ ರೂಪಾಯಿಗಳು ಮಾತ್ರ) ಮೊದಲ ಕಂತಾಗಿ ಬಿಡುಗಡೆ ಮಾಡಿದೆ.

ಹಣ ಸ್ವೀಕೃತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲುಸಹಿಯೊಂದಿಗೆ ಖಜಾನೆಯಿಂದ ಹಣ ಪಡೆಯಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಸದರಿ ಅನುದಾನವನ್ನು ಉಪಯೋಗಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ ನಿಯಮಗಳನ್ನು ಅನುಸರಿಸತಕ್ಕದ್ದು. ಎರಡನೇ ಕಂತಿನ ಅನುದಾನ ಬಿಡುಗಡೆಯ ಪೂರ್ವದಲ್ಲಿ ಪೂರ್ಣ ವೆಚ್ಚ ಮಾಡಿದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು (Utilization Certificate) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ಹಾಗೂ ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಹಾಗೂ ಪುನರಾವರ್ತಿತವಾಗಿ ವೆಚ್ಚಗಳು ಸಂಭವಿಸದಂತೆ ಎಚ್ಚರಿಕೆ ವಹಿಸಿ ನಿಯಮಾನುಸಾರ ವೆಚ್ಚ ಮಾಡತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ವಾಕೈ 125 ಆಂಆಸ(1) 2012, ದಿನಾಂಕ: 15.06.2012 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ಚಂದ್ರಮ್ಮ,**
ಪೀಠಾಧಿಕಾರಿ (ತಾಂತ್ರಿಕ ಕೋಶ) (ಪ್ರಭಾರ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪಿ.ಆರ್. 1801**

## COMMERCE & INDUSTRIES SECRETARIAT

**Sub** : Proposal of M/s West Coast paper Mills Ltd., to extend the validity period of approval of Government Order - reg.

**Read** : (1) Government Order No. CI 19 SPI 2008, dated 27.02.2008.

(2) Letter from M/s West Coast Paper Mills Ltd., dated 21.04.2012.

**PREAMBLE**:

M/s West Coast Paper Mills Ltd., in its letter read at (2) above has informed that they had submitted application for approval of the expansion programme vide their letter No. ZZ:Exp.Prog./WCPM-DOIC, dated 28.10.2006 and the same was approved vide read at (1).

Expansion programme included setting up of additional Boiler and Turbine was clearly mentioned in their application apart from enhancement in the production up to 320000 TPA. The project was also duly approved by Ministry of Environment and Forest, Govt. of India and Karnataka State Pollution Control Board both for increasing in the production capacity and power generating capacity.

They have successfully implemented the project and Investment Certificate for the same is already issued by the Commerce and Industries Department.

They had applied to Karnataka Power Transmission Corporation Ltd., for approval of evaluation of 20 MW captive powers for which permission was granted by them vide letter No. CEE(P&C).KCO/2008-09/17409/F-7 dated 22.06.2009.

Karnataka is power deficit state and export of power will be in the overall interest of the state.

However, laying of cable was not approved by the Forest Department as it falls under the Reserve Forest. Consequently, company has submitted revised application to KPTCL on 24.03.2012 for approval of the alternative proposal for up-gradation of 11 KV HT-2 line to 110 KV line by installation of 110 KV/11 KV, 15 MVA Transformer at Ambewadi Sub Station which is under their consideration. KPTCL has asked them to submit the approval from Commerce and Industries Dept. for 20 MW evaluation project as the validity period of the above Govt. Order was a period of 2 years.

Now the West Coast Paper Mills Ltd., has requested the Government that the validity of the said Government Order No. CI 19 SPI 2008, dated: 27.02.2008 for evaluation of 20 MW Power Project for the period up to 31.03.2012.

Government has examined the proposal in all aspects. Hence the order.

### GOVERNMENT ORDER NO: CI 254 SPI 2012, BANGALORE, DATED: 24.07.2012

Government is pleased to extend the validity period of approval of Government Order No. CI 19 SPI 2008, Dated: 27.02.2008 for further period of two years from the date of issue of this order.

The other terms and conditions of the Govt. Order read above at (1) remain the same.

By Order and in the name of the Governor of Karnataka,

**K.R. CHANDRAMMA**,
Desk Officer (Technical Cell) (I/c)
Commerce & Industries Department.

**PR 2030**

## COMMERCE & INDUSTRIES SECRETARIAT

### CORRIGENDUM

### No: CI 133 SPI 2012, Bangalore, dated: 24.07.2012

**Sub** : Approval to the Project proposal of M/s Shivashakti Sugars Limited to expand the "Sugar plant capacity from 3000 TCD to 7500 TCD Co-gen plant from 12mw to 45 mw, Ethanol plant from 30 KLPD to 60 KLPD" at Soundatti and Yadav Post, Raibag Taluk, Belagum-Reg.

**Read** : Government Order No: CI 133 SPI 2012, dated: 21.04.2012.

In the order portion of the Government Order No. CI 133 SPI 2012, dated: 21.04.2012, Distillery capacity mentioned as "**30 KLPD to 60 KLPD**" may be read as "**30 KLPD to 120 KLPD**".

Other terms and conditions, infrastructure facilities, incentives and concessions remain the same as in the G.O read at above.

By Order and in the name of the Governor of Karnataka,

**K.R. CHANDRAMMA**
Desk Officer (Technical Cell) (I/c)
Commerce & Industries Department.

**PR 2029**

## COMMERCE & INDUSTRIES SECRETARIAT

### CORRIGENDUM

### No: CI 79 SPI 2012, Bangalore, dated: 24th July 2012.

**Sub:** Approval to the Project proposal of M/s Sunrise Interactive India Ltd., to establish a "Maintenance Repair Overhaul (MRO) for Aerospace Sector" project in Govt. allotted land at Nallurhalli village, K.R. Puram Hobli, Bangalore (Urban) District.

**Ref:** Government Order No: CI 79 SPI 2012, dated: 23.04.2012.

In the order portion of the Government Order No: CI 79 SPI 2012, dated: 23.04.2012, after the words "to establish a Maintenance Repair Overhaul (MRO) for Aerospace Sector project" the following shall be inserted;

"in collaboration with Vyoneeshrosebank Technologies Pvt. Ltd.,".

The other terms and conditions remain the same as in the G.O read at above.

By Order and in the name of the Governor of Karnataka,

**K.R. CHANDRAMMA**
Desk Officer (Technical Cell) (I/c)
Commerce & Industries Department.

**PR 2028**

## COMMERCE & INDUSTRIES SECRETARIAT

**Sub:** Appointing KSIIDC as 'Nodal Agency' for Industrial PPPs related to SIR, NIMZ, Model Industrial Layout etc. – reg.

**Ref:** Letter No. JD(ID)/PS/KSIIDC-nodal agency/2011-12, dated 29-3-2012 from Commissioner for Industrial Development & Director of Industries and Commerce, Bangalore.

**PREAMBLE:**

The Department of Industrial Policy & Promotion, Ministry of Commerce & Industry, Govt. of India has taken an initiative on drafting National Manufacturing Policy. This is an initiative to push the share of manufacturing sector in increasing GDP of the country. The main focus of the proposed National Manufacturing Policy is to provide good physical infrastructure, appropriate, incentives and business friendly approval mechanisms.

Industry is a concurrent subject and the State is required to support the new policy initiatives. This will also contribute to enhance State GDP.

The intervention of the State is required in the following areas.

a) An institutional mechanism (SPV) to provide the infrastructure to National Manufacturing & Investment Zone (NMIZ).

b) To bring changes in industrial policy by including an additional package of incentives for the development of NMIZ.

c) To include special incentives for green and clean technologies in various industrial zones.

d) To bring all approval mechanisms in one fold to function in a time bound manner including deemed approval mechanisms.

e) The Skill Development Corporation of the State to join hands with the proposed SPV for the NMIZ to continuously cater manpower requirement at three broad levels – the very large pool of skilled person and a small yet significant pool of personnel with highly specialized skills. This may be done on PPP initiatives.

With reference to the above Policy, the Hon'ble Chief Minister of Karnataka has already addressed a letter to Hon'ble Prime Minister requesting for approval for establishment of two NMIZ in Karnataka.

In order to implement the above project proposals in the State, there is a need to undertake pre-feasibility study of the projects, provide all the required escort services to the proposed PPP projects at various levels of implementation and monitoring KSIIDC may be appointed as a Nodal Agency for this purpose. Accordingly, a background note is prepared and Commissioner for Industrial Development and Director of Industries and Commerce has recommended to approve KSIIDC as Nodal Agency for the following projects through PPP mode;

1. Special Investment Region (SIR), Dharwad
2. National Investment Manufacturing Zone (NIMZ), Tumkur
3. Model Industrial Area, Hassan

Hence the following order.

**GOVERNMENT ORDER NO: CI 163 SPI 2012, BANGALORE, DATED: 06-06-2012**

The Government is pleased to consider the proposal of the Commissioner and appoint KSIIDC as nodal agency for taking forward through PPP mode the following projects;-

1. Special Investment Region (SIR), Dharwad
2. National Investment Manufacturing Zone (NIMZ), Tumkur
3. Model Industrial Areas, Hassan

By Order and in the name of the Governor of Karnataka,

**JYOTHI R.J,**
Desk Officer (Technical Cell)
Commerce & Industries Department.

**PR 1785**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ 100 ಸಂಖ್ಯಾಬಲದ 50 ಹೊಸ ಮೆಟ್ರಿಕ್ ನಂತರ ಪುರುಷ / ಮಹಿಳೆಯರ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂ:ಹಿಂವಕನಿ: ವನಿಶಾ–2/ ಸಿಆರ್–4/2012–13 ದಿನಾಂಕ:28.04.2012

**ಪ್ರಸ್ತಾವನೆ:**

2012–13ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ, "ತಲಾ 100 ವಿದ್ಯಾರ್ಥಿಗಳ ಸಾಮರ್ಥ್ಯವುಳ್ಳ 50 ನೂತನ ಮೆಟ್ರಿಕ್ ನಂತರದ ಹಾಸ್ಟೆಲ್‌ಗಳನ್ನು ಪ್ರಾರಂಭಿಸಲಾಗುವುದು ಹಾಗೂ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಹಾಸ್ಟೆಲ್‌ಗಳ ಒಟ್ಟು ಸಾಮರ್ಥ್ಯವನ್ನು ಇನ್ನೂ 5000 ವಿದ್ಯಾರ್ಥಿಗಳಿಗೆ ಅವಕಾಶವಾಗುವಂತೆ ಹೆಚ್ಚಿಸಲಾಗುವುದು. ಈ ಕ್ರಮದಿಂದ ಒಟ್ಟು 10,000 ವಿದ್ಯಾರ್ಥಿಗಳಿಗೆ ಹೆಚ್ಚುವರಿ ಸೌಲಭ್ಯಗಳನ್ನು ಒದಗಿಸಿದಂತಾಗುತ್ತದೆ" ಎಂದು ಘೋಷಿಸಲಾಗಿದೆ.

ಮೇಲೆ ಓದಲಾದ ಏಕಕಡತದಲ್ಲಿ ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರು, 2012–13ನೇ ಸಾಲಿನಲ್ಲಿ 100 ಸಂಖ್ಯಾಬಲದ 50 ಹೊಸ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ಯಾವ ಜಿಲ್ಲೆಯ ಯಾವ ಸ್ಥಳದಲ್ಲಿ ಪ್ರಾರಂಭಿಸಬೇಕೆಂಬುದರ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಕುಂಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ:ಸಕಇ 159 ಬಿಎಂಎಸ್ 2012, ಬೆಂಗಳೂರು ದಿ:23.06.2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, 2012–13ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ಸ್ಥಳಗಳಲ್ಲಿ 27–ವೃತ್ತಿಪರ, 12–ಸ್ನಾತಕೋತ್ತರ, 11–ಸಾಮಾನ್ಯ ಮೆಟ್ರಿಕ್ ನಂತರದ ಪುರುಷ /ಮಹಿಳೆಯರ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಿ, ಸದರಿ ವಿದ್ಯಾರ್ಥಿ ನಿಲಯಗಳಿಗೆ ಈ ಕೆಳಗಿನಂತೆ ವಿವಿಧ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

| ಕ್ರ.ಸಂ. | ವಿವರ | ವೇತನ ಶ್ರೇಣಿ | ಒಂದು ವಿದ್ಯಾರ್ಥಿ ನಿಲಯಕ್ಕೆ ನಿಗಧಿಪಡಿಸಿರುವ ಹುದ್ದೆಗಳ ಸಂಖ್ಯೆ | 50 ವಿದ್ಯಾರ್ಥಿ ನಿಲಯಗಳಿಗೆ ಸಂಖ್ಯೆ |
|---|---|---|---|---|
| 01. | ನಿಲಯ ಮೇಲ್ವಿಚಾರಕರು/ವಾರ್ಡನ್ | ರೂ. 14550–26700 | 01 | 50 |
| 02. | ಅಡುಗೆಯವರು | ರೂ. 10400–16400 | 02 | 100 |
| 03 | ಅಡುಗೆ ಸಹಾಯಕರು | ರೂ. 9600–14550 | 02 | 100 |
| 04 | ರಾತ್ರಿ ಕಾವಲುಗಾರರು (ಬಾಲಕಿಯರ ವಸತಿ ನಿಲಯಗಳಿಗೆ ಮಾತ್ರ) | ರೂ. 9600–4550 | 01 | 21 |

ಇದಕ್ಕೆ ತಗಲುವ ವೆಚ್ಚವನ್ನು ಇಲಾಖೆಯ ಲೆಕ್ಕಶೀರ್ಷಿಕೆ :2225–03–277–2–53 ರಾಜ್ಯವಲಯ ಯೋಜನೆಯಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 375:ವೆಚ್ಚ 3/11, ದಿನಾಂಕ:6/6/2012 ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ ಎಂ ಭಾಟೆ,**
ಸರ್ಕಾರದ ಅಧೀನ ಕಾರ್ಯದರ್ಶಿ–3
ಸಮಾಜ ಕಲ್ಯಾಣ ಇಲಾಖೆ

## ಅನುಬಂಧ

## 2012–13ನೇ ಸಾಲಿಗೆ ಹೊಸದಾಗಿ ಮಂಜೂರಾತಿ ನೀಡಿರುವ ಪುರುಷ / ಮಹಿಳೆಯರ ವೃತ್ತಿಪರ/ಸ್ನಾತಕೋತ್ತರ/ಸಾಮಾನ್ಯ, ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಪಟ್ಟಿ

| ಕ್ರ ಸಂ | ಜಿಲ್ಲೆ | ಕ್ರ ಸಂ | ಮಂಜೂರು ಮಾಡಿರುವ ಸ್ಥಳ | ಪುರುಷ / ಮಹಿಳೆ | ವೃತ್ತಿಪರ/ ಸ್ನಾತಕೋತ್ತರ/ ಸಾಮಾನ್ಯ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| | | | ಬೆಂಗಳೂರು ವಿಭಾಗ | | | |
| 1 | ಬೆಂಗಳೂರು ನಗರ | 1 | ಬೆಂಗಳೂರು ನಗರ | ಮಹಿಳೆ | ಸ್ನಾತ್ತಕೋತ್ತರ | 100 |
| | | 2 | ಬೆಂಗಳೂರು ನಗರ | ಪುರುಷ | ವೃತ್ತಿಪರ | 100 |
| | | 3 | ಬೆಂಗಳೂರು ನಗರ | ಪುರುಷ | ಸ್ನಾತ್ತಕೋತ್ತರ | 100 |
| 2 | ಬೆಂಗಳೂರು (ಗ್ರಾ) | 4 | ದೊಡ್ಡಬಳ್ಳಾಪುರ | ಪುರುಷ | ವೃತ್ತಿಪರ | 100 |
| | | 5 | ಹೊಸಕೋಟೆ | ಪುರುಷ | ಸಾಮಾನ್ಯ | 100 |
| 3 | ರಾಮನಗರ | 6 | ರಾಮನಗರ ಟೌನ್ | ಮಹಿಳೆ | ವೃತ್ತಿಪರ | 100 |
| 4 | ದಾವಣಗೆರೆ | 7 | ದಾವಣಗೆರೆ ಟೌನ್ | ಮಹಿಳೆ | ಸ್ನಾತ್ತಕೋತ್ತರ | 100 |
| | | 8 | ದಾವಣಗೆರೆ ಟೌನ್ | ಪುರುಷ | ಸ್ನಾತ್ತಕೋತ್ತರ | 100 |
| | | 9 | ದಾವಣಗೆರೆ ಟೌನ್ | ಪುರುಷ | ಸಾಮಾನ್ಯ | 100 |
| 5 | ಚಿಕ್ಕಬಳ್ಳಾಪುರ | 10 | ಚಿಕ್ಕಬಳ್ಳಾಪುರ ಟೌನ್ | ಮಹಿಳೆ | ವೃತ್ತಿಪರ | 100 |
| 6 | ತುಮಕೂರು | 11 | ತುಮಕೂರು | ಮಹಿಳೆ | ಸ್ನಾತ್ತಕೋತ್ತರ | 100 |
| | | 12 | ತಿಪಟೂರು ಟೌನ್ | ಪುರುಷ | ಸಾಮಾನ್ಯ | 100 |
| | | 13 | ತುಮಕೂರು | ಪುರುಷ | ವೃತ್ತಿಪರ | 100 |
| 7 | ಕೋಲಾರ | 14 | ಕೋಲಾರ ಟೌನ್ | ಮಹಿಳೆ | ಸ್ನಾತ್ತಕೋತ್ತರ | 100 |
| | | 15 | ಕೆ.ಜಿ.ಎಫ್ | ಪುರುಷ | ವೃತ್ತಿಪರ | 100 |
| 8 | ಶಿವಮೊಗ್ಗ | 16 | ಸೊರಬ | ಪುರುಷ | ವೃತ್ತಿಪರ | 100 |
| | | | ಬೆಳಗಾಂ ವಿಭಾಗ | | | |
| 8 | ಬಿಜಾಪುರ | 17 | ಬಿಜಾಪುರ ಟೌನ್ | ಮಹಿಳೆ | ಸ್ನಾತ್ತಕೋತ್ತರ | 100 |
| | | 18 | ಬಿಜಾಪುರ ಟೌನ್ | ಪುರುಷ | ವೃತ್ತಿಪರ | 100 |
| 9 | ಬಾಗಲಕೋಟೆ | 19 | ಬಾಗಲಕೋಟೆ ಟೌನ್ | ಪುರುಷ | ವೃತ್ತಿಪರ | 100 |
| | | 20 | ಮುಧೋಳ | ಪುರುಷ | ಸಾಮಾನ್ಯ | 100 |
| 10 | ಗದಗ | 21 | ಗದಗ ಟೌನ್ | ಮಹಿಳೆ | ವೃತ್ತಿಪರ | 100 |
| | | 22 | ಗದಗ ಟೌನ್ | ಪುರುಷ | ವೃತ್ತಿಪರ | 100 |
| 11 | ಹಾವೇರಿ | 23 | ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಗೊಟಗೋಡಿ ಶಿಗ್ಗಾಂವ್ | ಮಹಿಳೆ | ಸ್ನಾತ್ತಕೋತ್ತರ | 100 |
| | | 24 | ಹಾವೇರಿ ಟೌನ್ | ಪುರುಷ | ವೃತ್ತಿಪರ | 100 |
| | | 25 | ಹಾನಗಲ್ | ಪುರುಷ | ವೃತ್ತಿಪರ | 100 |
| | | 26 | ರಾಣೇಬೆನ್ನೂರು(ಸುಣಕಲ್ ಬಿದ್ರಿ) | ಪುರುಷ | ಸಾಮಾನ್ಯ | 100 |

| ಕ್ರ. ಸಂ | ಜಿಲ್ಲೆ | ಕ್ರ. ಸಂ | ಮಂಜೂರು ಮಾಡಿರುವ ಸ್ಥಳ | ಪುರುಷ / ಮಹಿಳೆ | ವೃತ್ತಿಪರ/ ಸ್ನಾತಕೋತ್ತರ/ ಸಾಮಾನ್ಯ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 12 | ಧಾರವಾಡ | 27 | ಧಾರವಾಡ ಟೌನ್ | ಪುರುಷ | ವೃತ್ತಿಪರ | 100 |
| 13 | ಉತ್ತರ ಕನ್ನಡ | 28 | ಕಾರವಾರ ಟೌನ್ | ಪುರುಷ | ವೃತ್ತಿಪರ | 100 |
| | | | **ಗುಲ್ಬರ್ಗಾ ವಿಭಾಗ** | | | |
| 14 | ಗುಲ್ಬರ್ಗ | 29 | ಗುಲ್ಬರ್ಗ ಟೌನ್ | ಪುರುಷ | ವೃತ್ತಿಪರ | 100 |
| 15 | ಕೊಪ್ಪಳ | 30 | ಕೊಪ್ಪಳ ಟೌನ್ | ಮಹಿಳೆ | ವೃತ್ತಿಪರ | 100 |
| 16 | ಯಾದಗಿರಿ | 31 | ಯಾದಗಿರಿ ಟೌನ್ | ಮಹಿಳೆ | ವೃತ್ತಿಪರ | 100 |
| 17 | ಬಳ್ಳಾರಿ | 32 | ಬಳ್ಳಾರಿ ಟೌನ್ | ಪುರುಷ | ಸಾಮಾನ್ಯ | 100 |
| | | 33 | ಕನ್ನಡ ವಿಶ್ವವಿದ್ಯಾಲಯ ಹಂಪಿಹೊಸಪೇಟೆ | ಪುರುಷ | ಸ್ನಾತ್ತಕೋತ್ತರ | 100 |
| | | 34 | ಕನ್ನಡ ವಿಶ್ವವಿದ್ಯಾಲಯ ಹಂಪಿಹೊಸಪೇಟೆ | ಮಹಿಳೆ | ಸ್ನಾತ್ತಕೋತ್ತರ | 100 |
| 18 | ರಾಯಚೂರು | 35 | ರಾಯಚೂರು ಟೌನ್ | ಮಹಿಳೆ | ವೃತ್ತಿಪರ | 100 |
| 19 | ಬೀದರ್ | 36 | ಬೀದರ್ ಟೌನ್ | ಮಹಿಳೆ | ವೃತ್ತಿಪರ | 100 |
| | | | **ಮೈಸೂರು ವಿಭಾಗ** | | | |
| 20 | ಮಂಡ್ಯ | 37 | ಮಂಡ್ಯ ಟೌನ್ | ಪುರುಷ | ವೃತ್ತಿಪರ | 100 |
| | | 38 | ಮಂಡ್ಯ ಟೌನ್ | ಮಹಿಳೆ | ವೃತ್ತಿಪರ | 100 |
| 21 | ಚಾಮರಾಜ ನಗರ | 39 | ಚಾಮರಾಜ ನಗರ ಟೌನ್ | ಮಹಿಳೆ | ವೃತ್ತಿಪರ | 100 |
| | | 40 | ಸಂತೆಮರಹಳ್ಳಿ | ಮಹಿಳೆ | ಸಾಮಾನ್ಯ | 100 |
| 22 | ದಕ್ಷಿಣ ಕನ್ನಡ | 41 | ಮಂಗಳೂರು ಟೌನ್ | ಪುರುಷ | ವೃತ್ತಿಪರ | 100 |
| 23 | ಕೊಡಗು | 42 | ಪೊನ್ನಂಪೇಟೆ,ವಿರಾಜ ಪೇಟೆ ತಾಲೂಕು | ಮಹಿಳೆ | ವೃತ್ತಿಪರ | 100 |
| | | 43 | ಕುಶಾಲ ನಗರ, ಸೋಮವಾರ ಪೇಟೆ ತಾ: | ಪುರುಷ | ವೃತ್ತಿಪರ | 100 |
| 24 | ಹಾಸನ | 44 | ಹಾಸನ ಟೌನ್ | ಮಹಿಳೆ | ಸ್ನಾತ್ತಕೋತ್ತರ | 100 |
| | | 45 | ಹಾಸನ ಟೌನ್ | ಪುರುಷ | ಸ್ನಾತ್ತಕೋತ್ತರ | 100 |
| | | 46 | ಬೇಲೂರು ಟೌನ್ | ಪುರುಷ | ಸಾಮಾನ್ಯ | 100 |
| 25 | ಉಡುಪಿ | 47 | ಉಡುಪಿ ಟೌನ್ | ಮಹಿಳೆ | ಸಾಮಾನ್ಯ | 100 |
| 26 | ಚಿಕ್ಕಮಗಳೂರು | 48 | ಶೃಂಗೇರಿ ಟೌನ್ | ಪುರುಷ | ಸಾಮಾನ್ಯ | 100 |
| | | 49 | ಕಡೂರು | ಮಹಿಳೆ | ಸಾಮಾನ್ಯ | 100 |
| | | 50 | ಚಿಕ್ಕಮಗಳೂರು ಟೌನ್ | ಪುರುಷ | ವೃತ್ತಿಪರ | 100 |

**ಎಂ ಎಂ ಭಾಟೆ,**
ಸರ್ಕಾರದ ಅಧೀನ ಕಾರ್ಯದರ್ಶಿ–3
ಸಮಾಜ ಕಲ್ಯಾಣ ಇಲಾಖೆ

**ಪಿ.ಆರ್. 1828**

## INFRASTRUCTURE DEVELOPMENT SECRETARIAT

**Sub** : Release of Funds for engaging the services of M C & A as Branding and Communication agency of Infrastructure Development Department.

**Read** : 1. G.O. No. IDD 138 IDM 2011 dated 28.07.2011.

2. Letter No.IDD/CSD/096, dated 16.04.2012 from DGM, MC&A Ltd, Bangalore.

3. Letter No. IDD/CSD/353, dated 11.05.2012 from Client Servicing, MC&A Ltd; Letter No. IDD/CSD/1126, dated 27.06.2012 from Client Servicing, MC&A Ltd.

**PREAMBLE:**

In the G.O read at (1) above, sanction was accorded for engaging the services of Marketing Consultants & Agencies ltd., Bangalore as Branding & Communication Agency of IDD with a view to project various activities of the department before the GIM 2012.

In the letter read at (2) above, the Deputy General Manager, MC&A has submitted proposal towards providing consultancy services of Branding & Communication for IDD for the month of March 2012 for an amount of Rs 2.00 lakhs and requested the Government for release of amount in this regard.

In the letters read at (3) above, the Client Servicing, MC&A has submitted proposals towards providing consultancy services of Branding & Communication for IDD for the months of April 2012 and May 2012 for an amount of Rs 2.03,736/- each and requested the Government for release of amount in this regard.

Hence the following orders.

### GOVERNMENT ORDER NO.IDD 138 IDM 2011, BANGALORE DATED:28.07.2012

Under the circumstances explained in the preamble, Government is pleased to accord sanction to release Rs 6,00,000/- (2,00,000+2,00,000+2,00,000) (Rs. Six lakhs only) for the months of March 2012, April 2012 & May 2012 to Managing Director, MC&A, Bangalore towards providing consultancy services of Branding & Communication for IDD for the progress achieved by MC & A Bangalore.

2. The expenditure shall be met out under the Budget Head 3451-00-090-1-06-059 Infrastructure Preliminary Studies other expenditure (Plan) 2012-13.

3. The Managing Director, MC&A, Bangalore is authorized to draw the amount on a Payees Receipt duly countersigned by the Under Secretary to Government, Infrastructure Development Department from the State Huzoor Treasury, Bangalore.

4. This order is issued in accordance with the delegation of financial powers to Principal Secretary/Secretary to Govt., vide G.O No. FD 04 TFP 2012 dated 27/04/2012.

By order and in the name of the Governor of Karnataka,

**M.MANJULA**
Under Secretary to Govt.(I/c)
Infrastructure Development Department

**PR 1987**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:–** ಹಾವೇರಿ ಪಶು ಆಸ್ಪತ್ರೆ ಆವರಣದಲ್ಲಿ 2012–13 ನೇ ಸಾಲಿಗೆ ಪಶುವೈದ್ಯ ಪಾಲಿಟೆಕ್ನಿಕ್ ಅನ್ನು ಕರ್ನಾಟಕ ಪಶುವೈದ್ಯಕೀಯ, ಪಶು ಮತ್ತು ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ವತಿಯಿಂದ ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:–**
1) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 267 ಪಸಸೇ 2011, ದಿನಾಂಕ: 15–12–2011.
2) ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 267 ಪಸಸೇ 2011, ದಿನಾಂಕ: 07–1–2012.
3) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 114 ಪಸಸೇ 2011, ದಿನಾಂಕ: 16–3–2012.
4) ಕುಲ ಸಚಿವರು, ಕಪಪಮೀವಿವಿ ಇವರ ಪತ್ರ ಸಂಖ್ಯೆ: ಕುಸ/ಆಪಸಂ/ಪಪಾಬಂ/12–13, ದಿನಾಂಕ: 09–06–2012.
5) ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆ ಇವರ ಪತ್ರ ಸಂಖ್ಯೆ: ಆಪಸಂ/ಶಿಕ್ಷಣ/ವಿವ–31/2010–11, ದಿ: 12–06–2012.

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ 2011–12 ನೇ ಶೈಕ್ಷಣಿಕ ವರ್ಷದಿಂದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಅಧೀನದಲ್ಲಿರುವ ಖಿಲಾರ್ ತಳಿ ಸಂವರ್ಧನಾ ಕೇಂದ್ರ, ಬಂಕಾಪುರ, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಅಡಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಗ್ರಾಮೀಣ ಅಭ್ಯರ್ಥಿಗಳಿಗೆ ಸೀಮಿತವಾಗಿ ವಿಶ್ವವಿದ್ಯಾಲಯವು ತನ್ನ ಯೋಜನಾ ವರದಿಯಲ್ಲಿ ತಯಾರಿಸಿರುವ ಪಠ್ಯಕ್ರಮದಂತೆ 2 ವರ್ಷಗಳ ಡಿಪ್ಲೋಮಾ ಪಶುಸಂಗೋಪನಾ ಪಾಲಿಟೆಕ್ನಿಕ್ ಸ್ಥಾಪಿಸಲು ಮಂಜೂರಾತಿ ನೀಡಲಾಗಿರುತ್ತದೆ. ಈ ಪಶುಸಂಗೋಪನಾ ಪಾಲಿಟೆಕ್ನಿಕ್‌ಗೆ ಪ್ರಾರಂಭದಲ್ಲಿ 50 ವಿದ್ಯಾರ್ಥಿಗಳ ಪ್ರವೇಶ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ. ಅಲ್ಲದೆ, ಈ ಪಾಲಿಟೆಕ್ನಿಕ್ ಸ್ಥಾಪಿಸಲು ಅಗತ್ಯವಾದ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳನ್ನು ಭರಿಸಲು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್‌ಗೆ 2011–12 ನೇ ಸಾಲಿನ ಪೂರಕ ಅಂದಾಜು–II ರಲ್ಲಿ ಲೆಕ್ಕಶೀರ್ಷಿಕೆ 2403–00–800–0–22–101 (ಯೋಜನೇತರ) ಅಡಿ ರೂ 200.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, 5 ಬೋಧಕ ಹುದ್ದೆಗಳನ್ನು ಮತ್ತು 11 ಬೋಧಕೇತರ ಹುದ್ದೆಗಳನ್ನು ಸೃಜಿಸಲು ಅನುಮತಿ ನೀಡಲಾಗಿರುತ್ತದೆ ಹಾಗೂ ಎಲ್ಲಾ ಬೋಧಕೇತರ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಲು ಆದೇಶಿಸಲಾಗಿದೆ.

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ, ಖಿಲಾರ ತಳಿ ಸಂವರ್ಧನಾ ಕೇಂದ್ರ, ಬಂಕಾಪುರ, ಶಿಗ್ಗಾಂವ್, ಬಂಕಾಪುರ ತಾಲ್ಲೂಕು, ಹಾವೇರಿ ಇಲ್ಲಿ ಪಾಲಿಟೆಕ್ನಿಕ್ ಸ್ಥಾಪಿಸಲು ಅಗತ್ಯವಾದ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳನ್ನು ಭರಿಸಲು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರಿಗೆ 2011–12 ನೇ ಸಾಲಿನ ಪೂರಕ ಅಂದಾಜು–II ರಲ್ಲಿ ಲೆಕ್ಕಶೀರ್ಷಿಕೆ 2403–00–800–0–22–101 (ಯೋಜನೇತರ) ಅಡಿ ರೂ. 200.00 ಲಕ್ಷಗಳ ಅನುದಾನವನ್ನು ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಅಡಿಯಲ್ಲಿ ಕೊನೆಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಹಾಗೂ ಹಾವೇರಿ ಜಿಲ್ಲೆಯಲ್ಲಿ ಪಶು ಸಂಗೋಪನೆ ಪಾಲಿಟೆಕ್ನಿಕ್ ಸ್ಥಾಪಿಸಲು ಮೂಲಭೂತ ಸೌಕರ್ಯಗಳಿಗಾಗಿ ಕೇಂದ್ರವು ಒದಗಿಸಿರುವ ನೆರವು ರೂ. 600.00 ಲಕ್ಷಗಳನ್ನು ಒಂದಾವರ್ತಿ ಹೆಚ್ಚುವರಿ ಅನುದಾನವನ್ನಾಗಿ ಬಿಡುಗಡೆ ಮಾಡಲಾಗಿದೆ.

ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆಯ ಅಡಿಯಲ್ಲಿರುವ ಖಿಲಾರ ತಳಿ ಸಂವರ್ಧನಾ ಕೇಂದ್ರ, ಬಂಕಾಪುರದಲ್ಲಿ ಎರಡನೇ ಪಾಲಿಟೆಕ್ನಿಕ್ ಕಾಲೇಜನ್ನು ಸ್ಥಾಪಿಸಲು 50 ಎಕರೆ ಜಮೀನನ್ನು ಗುರುತಿಸಿದ್ದು ಸದರಿ ಬಂಕಾಪುರ ಕೇಂದ್ರವನ್ನು ಸುರಕ್ಷಿತ ಅರಣ್ಯ ವಲಯ ಪ್ರದೇಶ (ನವಿಲುಧಾಮ) ಎಂದು ಘೋಷಿಸಿರುವುದರಿಂದ 2 ನೇ ಪಾಲಿಟೆಕ್ನಿಕ್ ಕಾಲೇಜು ಸ್ಥಾಪಿಸುವಲ್ಲಿ ವಿಳಂಬವಾಗುತ್ತಿದ್ದು ಪರ್ಯಾಯವಾಗಿ ಶಿಗ್ಗಾಂವ್ ತಾಲ್ಲೂಕಿನ ಹುಣಸಿಕಟ್ಟೆ ಹಾಗೂ ಗಂಜಿಗಟ್ಟಿ ಸರಹದ್ದಿನಲ್ಲಿರುವ ಜಮೀನುಗಳನ್ನು ಪಶುಸಂಗೋಪನಾ ಪಾಲಿಟೆಕ್ನಿಕ್ ಸ್ಥಾಪನೆ ಕುರಿತಂತೆ ಪರಿವೀಕ್ಷಿಸಲಾಗಿ, ಈ ಪೈಕಿ ಗಂಜಿಗಟ್ಟಿ ಗ್ರಾಮದ ಸರ್ವೆ ನಂಬರ್ 71ರಲ್ಲಿನ 14 ಎಕರೆ 28 ಗುಂಟೆ ಪೈಕಿ 11 ಎಕರೆ 20 ಗುಂಟೆ ಖುಲ್ಲಾ ಜಾಗ ಇದ್ದು ಸದರಿ ಜಮೀನು ಪಾಲಿಟೆಕ್ನಿಕ್ ಸ್ಥಾಪನೆಗೆ ಸೂಕ್ತವೆಂದು ಹಾಗೂ ಪಾಲಿಟೆಕ್ನಿಕ್ ಸ್ಥಾಪನೆಗೆ ಸಂಬಂಧಪಟ್ಟ ಮೂಲಭೂತ ಸೌಕರ್ಯ, ಶೈಕ್ಷಣಿಕ, ವಿದ್ಯಾರ್ಥಿನಿಲಯ ಹಾಗೂ ಇತರೆ ಬೋಧನಾ ಕಾರ್ಯಗಳಿಗೆ ವಿನಿಯೋಗಿಸುವುದರ ಜೊತೆಗೆ ಸಮೀಪದಲ್ಲಿರುವ ಇಲಾಖೆಯ ಖಿಲಾರ್ ತಳಿ ಸಂವರ್ಧನಾ ಕೇಂದ್ರ, ಬಂಕಾಪುರದ ಸೌಲಭ್ಯಗಳನ್ನು ಪ್ರಾಯೋಗಿಕ ತರಬೇತಿಗಾಗಿ ಬಳಸಿಕೊಳ್ಳಬಹುದಾಗಿದೆ ಎಂದು ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರು ಮೇಲೆ ಓದಲಾದ (5)ರ ಪತ್ರದಲ್ಲಿ ಅಭಿಪ್ರಾಯಪಟ್ಟಿರುತ್ತಾರೆ. ಹಾಗೂ ಹಾವೇರಿ ಜಿಲ್ಲಾಧಿಕಾರಿಗಳು, ಗಂಜಿಗಟ್ಟಿ ಗ್ರಾಮದ ಸವೇ ನಂ.71 ರಲ್ಲಿನ 11 ಎಕರೆ 20 ಗುಂಟೆ ಜಮೀನನ್ನು ಸರ್ಕಾರಿ ಮುಫತ್ ಗಾಯರಾಣ ಇದ್ದು, ಕರ್ನಾಟಕ ಭೂ ಕಂದಾಯ ನಿಯಮಗಳು 1966 ರ ನಿಯಮ 97 (4) ರನ್ವಯ ಗಾಯರಾಣಾ ಶೀರ್ಷಿಕೆಯಿಂದ ಕಡಿಮೆಗೊಳಿಸಿ ಪಶುಪಾಲನಾ ಡಿಪ್ಲೊಮಾ ಪಾಲಿಟೆಕ್ನಿಕ್ ಕಾಲೇಜು ಸ್ಥಾಪನೆಗೆ ಮಂಜೂರು ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡುವಂತೆ ಬೆಳಗಾವಿ ವಿಭಾಗದ ಪ್ರಾದೇಶಿಕ ಆಯುಕ್ತರಿಗೆ ಕೋರಿರುತ್ತಾರೆ.

ಸದರಿ ಪ್ರಕ್ರಿಯೆಯು ಜಾರಿಯಲ್ಲಿದ್ದು, ಶಿಗ್ಗಾಂವ್ ತಾಲ್ಲೂಕಿನ, ಗಂಜಿಗಟ್ಟಿ ಗ್ರಾಮದ ಸರ್ವೆ ನಂ.71 ರಲ್ಲಿನ 11 ಎಕರೆ 20 ಗುಂಟೆ ಜಮೀನು ಪಾಲಿಟೆಕ್ನಿಕ್ ಸ್ಥಾಪನೆಗೆ ಸೂಕ್ತವಿದ್ದು 2012–13 ನೇ ಶೈಕ್ಷಣಿಕ ವರ್ಷದಲ್ಲಿ 50 ಗ್ರಾಮಾಂತರ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ ಹಾವೇರಿ ಪಶು ವೈದ್ಯಕೀಯ ಆಸ್ಪತ್ರೆ ಆವರಣದಲ್ಲಿರುವ ಪ್ರಾದೇಶಿಕ ಕುಕ್ಕುಟ ಕೇಂದ್ರದ ಕಟ್ಟಡದಲ್ಲಿ ತಾತ್ಕಾಲಿಕ ವ್ಯವಸ್ಥೆ ಮಾಡಿಕೊಂಡು ಪಶುಸಂಗೋಪನಾ ಪಾಲಿಟೆಕ್ನಿಕನ್ನು ಪ್ರಾರಂಭಿಸಲು ಅನುಮತಿ ಹಾಗೂ ಮಂಜೂರಾತಿ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಪಶುಪಾಲನಾ ಆಯುಕ್ತರು ಕೋರಿರುತ್ತಾರೆ.

ಸರ್ಕಾರವು 2012–13 ನೇ ಶೈಕ್ಷಣಿಕ ವರ್ಷಕ್ಕೆ ನಿಗದಿಯಾದ 50 ಗ್ರಾಮಾಂತರ ವಿದ್ಯಾರ್ಥಿಗಳನ್ನು ಆಯ್ಕೆಮಾಡಿ ಹಾವೇರಿ ಪಶುಆಸ್ಪತ್ರೆ ಆವರಣದಲ್ಲಿರುವ ಪ್ರಾದೇಶಿಕ ಕುಕ್ಕುಟ ಕೇಂದ್ರದ ಕಟ್ಟಡದಲ್ಲಿ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರ ವತಿಯಿಂದ ತಾತ್ಕಾಲಿಕವಾಗಿ ವ್ಯವಸ್ಥೆ ಮಾಡಿಕೊಂಡು ಪಶುಪಾಲನಾ ಪಾಲಿಟೆಕ್ನಿಕ್ ಪ್ರಾರಂಭಿಸಲು ಅನುಮತಿ ಮತ್ತು ಮಂಜೂರಾತಿ ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 152 ಪಆಸೇ 2012, ಬೆಂಗಳೂರು, ದಿನಾಂಕ: 26ನೇ ಜೂನ್ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು 2012–13 ನೇ ಶೈಕ್ಷಣಿಕ ವರ್ಷಕ್ಕೆ ನಿಗದಿಯಾದ 50 ಗ್ರಾಮಾಂತರ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ ಹಾವೇರಿ ಪಶು ಆಸ್ಪತ್ರೆ ಆವರಣದಲ್ಲಿರುವ ಪ್ರಾದೇಶಿಕ ಕುಕ್ಕುಟ ಕೇಂದ್ರದ ಕಟ್ಟಡದಲ್ಲಿ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರ ವತಿಯಿಂದ ತಾತ್ಕಾಲಿಕವಾಗಿ ವ್ಯವಸ್ಥೆ ಮಾಡಿಕೊಂಡು ಪಶುಪಾಲನಾ ಪಾಲಿಟೆಕ್ನಿಕ್ ಪ್ರಾರಂಭಿಸಲು ಅನುಮತಿ ಮತ್ತು ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸರಸಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ)

**ಪಿ.ಆರ್. 1957**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ತುಮಕೂರು ನಗರಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ.21195.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ವ್ಯ.ನಿ., ಕನನೀಸಒಚಮಂಡಳಿರವರ ಪತ್ರ ಸಂಖ್ಯೆ:ಕಜಮಂ.ಮುಅ/ ಆಶ್ರೇಕಾಅ(ಬೆಂ)/ತಾ.ಸ–8/ತುಮಕೂರು–ಒಚಯೋ/3151/ 2010–11 ದಿ:02.12.2010

**ಪ್ರಸ್ತಾವನೆ :**

ತುಮಕೂರು ನಗರದ ಜನಸಂಖ್ಯೆಯು 2001ರ ಜನಗಣತಿ ಪ್ರಕಾರ 2,48,592 ಇದ್ದು, ಪ್ರಸ್ತುತ 3,12,000 ಇರುತ್ತದೆ ಹಾಗೂ 2027ರಲ್ಲಿ 4,80,515 ಮತ್ತು 2042ರಲ್ಲಿ 7,02,802 ಆಗಬಹುದೆಂದು ಅಂದಾಜಿಸಲಾಗಿದೆ. ಈ ನಗರಕ್ಕೆ ದಿನಂಪ್ರತಿ 15 ದಶಲಕ್ಷ ಲೀಟರ್ ನೀರನ್ನು ಹಾಲಿ ನೀರು ಸರಬರಾಜು ಯೋಜನೆಯಿಂದ ಹಾಗೂ 8 ದಶಲಕ್ಷ ಲೀಟರ್ ನೀರನ್ನು ಕೊಳವೆ ಬಾವಿಗಳ ಮೂಲಕ ಒಟ್ಟು 23 ದಶಲಕ್ಷ ಲೀಟರ್ ನೀರು ಸರಬರಾಜು ಮಾಡಲಾಗುತ್ತಿದೆ.

ಎರಡನೇ ಹಂತದ ನೀರು ಸರಬರಾಜು ಯೋಜನೆಯನ್ನು ರೂ.4727.00 ಲಕ್ಷಗಳಲ್ಲಿ ಕಲ್ಪಿಸಲು ಸರ್ಕಾರವು ಅನುಮೋದನೆ ನೀಡಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ. ಈ ಯೋಜನೆಯನ್ನು 2012–13ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ. ಯೋಜನೆ ಚಾಲ್ತಿಗೊಂಡ ನಂತರ 50 ಎಂ.ಎಲ್.ಡಿ., ನೀರನ್ನು ಹೆಚ್ಚುವರಿಯಾಗಿ ಸರಬರಾಜು ಮಾಡಬಹುದಾಗಿದೆ. ಅಂದರೆ, ನಗರಕ್ಕೆ ಒಟ್ಟು 73 ಎಂ.ಎಲ್.ಡಿ., ನೀರನ್ನು ಸರಬರಾಜು ಮಾಡಲು ಸಾಧ್ಯವಾಗುತ್ತದೆ. ತುಮಕೂರು ನಗರವನ್ನು ಕನ್ನಡ ಗಂಗಾ ಯೋಜನೆ ಹಂತ–1ರಡಿ ಸೇರಿಸಿದ್ದು, ಈ ಯೋಜನೆಯಡಿ ನಗರ ವಿತರಣಾ ಜಾಲದ ಪುನರ್‌ನವೀಕರಣ ಹಾಗೂ 24/7 ನೀರು ಸರಬರಾಜು ಮಾಡುವ ಕಾಮಗಾರಿಗಳು ಒಳಗೊಂಡಿರುತ್ತವೆ.

ತುಮಕೂರು ನಗರಕ್ಕೆ ಮೊದಲನೇ ಹಂತದ ಒಳಚರಂಡಿ ಯೋಜನೆಯನ್ನು 2003ರಲ್ಲಿ ಎ.ಡಿ.ಬಿ., ಯೋಜನೆಯಡಿ ಪೂರ್ಣಗೊಳಿಸಿ, ಚಾಲ್ತಿಗೊಳಿಸಲಾಗಿದೆ. ಈ ಯೋಜನೆಯಿಂದ ಶೇ.65ರಷ್ಟು ನಗರದ ಮಧ್ಯ ಭಾಗದ ಪ್ರದೇಶಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಪ್ರಸ್ತುತ ಈ ನಗರಕ್ಕೆ ಸುತ್ತಮುತ್ತಲಿನ 23 ಹಳ್ಳಿಗಳು ಸೇರ್ಪಡೆಯಾಗಿದ್ದು, ಹೊಸ ಬಡಾವಣೆಗಳು ಅಭಿವೃದ್ಧಿಗೊಂಡಿವೆ. ಈ ಪ್ರದೇಶಗಳಲ್ಲಿ ಒಳಚರಂಡಿ ವ್ಯವಸ್ಥೆ

ಇರುವುದಿಲ್ಲ. ಸಾರ್ವಜನಿಕರು ಲೀಚ್ ಪಿಟ್‌ಗಳನ್ನು ನಿರ್ಮಿಸಿಕೊಂಡಿದ್ದು, ಉಳಿದವರು ತೆರೆದ ಚರಂಡಿಗಳಿಗೆ ಮಲೀನ ನೀರನ್ನು ಬಿಡುತ್ತಿದ್ದಾರೆ. ಇದರಿಂದ, ನೈರ್ಮಲ್ಯ ಉಂಟಾಗುತ್ತಿದೆ. ಇದನ್ನು ತಪ್ಪಿಸಲು 2ನೇ ಹಂತದ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವುದು ಅನಿವಾರ್ಯವಾಗಿದೆ.

ಈ ನಗರಕ್ಕೆ ಪ್ರಸ್ತುತ 1ನೇ ಹಾಗೂ 2ನೇ ಹಂತದ ನೀರು ಸರಬರಾಜು ಯೋಜನೆ ಮತ್ತು ಕೊಳವೆ ಬಾವಿಗಳ ಮೂಲದಿಂದ ತಲಾ ದಿನಂಪ್ರತಿ 135 ಲೀಟರ್ ನೀರನ್ನು 2042ರಲ್ಲಿ ನಿರೀಕ್ಷಿಸಲಾದ ಜನಸಂಖ್ಯೆಗೆ ಅನುಗುಣವಾಗಿ ತಲಾದಿನಂಪ್ರತಿ 110 ಲೀಟರ್ ಗ್ರಾಮಸಾರವೆಂದು ಪರಿಗಣಿಸಿ, ಯೋಜನೆಯನ್ನು ವಿನ್ಯಾಸಿಸಲಾಗಿದೆ. ಯೋಜನೆಯಲ್ಲಿ ಕೊಳವೆ ಮಾರ್ಗ ಆಳಗುಂಡಿಗಳನ್ನು ನಿರ್ಮಿಸಲು ಉದ್ದೇಶಿಸಿದ್ದು, ಗ್ರಾಮಸಾರ ಶುದ್ಧೀಕರಣ ಘಟಕವನ್ನು ಎಸ್.ಬಿ.ಆರ್. ತಾಂತ್ರಿಕತೆಯಲ್ಲಿ ನಿರ್ಮಿಸಲು ಅನುವು ಮಾಡಲಾಗಿದೆ. ಪ್ರತಿವಲಯದಲ್ಲೂ ವೆಟ್‌ವೆಲ್‌ಗಳನ್ನು ಹಾಗೂ ವೆಟ್‌ವೆಲ್‌ಗಳಲ್ಲಿ ವಿವಿಧ ಸಾಮರ್ಥ್ಯದ ವಿದ್ಯುತ್ ಯಂತ್ರಗಳನ್ನು ಅಳವಡಿಸಲು ಉದ್ದೇಶಿಸಲಾಗಿದೆ. ಈ ಯೋಜನೆಯಡಿ ಸುಮಾರು 30,000 ಮನೆಗಳಿಗೆ ಒಳಚರಂಡಿ ಜೋಡಿಕೆ ಕಾಮಗಾರಿಗೆ ಅವಕಾಶ ಕಲ್ಪಿಸಲಾಗಿದೆ. ಈ ಯೋಜನೆಯನ್ನು 2010–11ನೇ ಸಾಲಿನ ಮಂಡಳಿಯ ಹಾಗೂ ಲೋಕೋಪಯೋಗಿ ಇಲಾಖೆಯ ದರಪಟ್ಟಿಯನ್ನು ಆಧರಿಸಿ ರೂ.21580.00 ಲಕ್ಷಗಳ ಅಂದಾಜಿನಲ್ಲಿ, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಸರ್ಕಾರದಿಂದ ಸಾಲ – ಶೇ.20 | ರೂ. 4,316.00 ಲಕ್ಷಗಳು. |
| ಆರ್ಥಿಕ ಸಂಸ್ಥೆಗಳಿಂದ ಸಾಲ – ಶೇ.50 | ರೂ.10,790.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ಕೊಡುಗೆ – ಶೇ.30 | ರೂ. 6,474.00 ಲಕ್ಷಗಳು |
| **ಒಟ್ಟು** | **ರೂ.21,580.00 ಲಕ್ಷಗಳು** |

ಆದರೆ ಸರ್ಕಾರದ ಪರಿಶೀಲನೆಯ ನಂತರ ಮಂಡಳಿಗೆ ಕೆಲವು ವಿವರಣೆಗಳನ್ನು ಸಲ್ಲಿಸಲು ಸೂಚಿಸಿದ ನಂತರ ಸದರಿ ಯೋಜನೆಯ ಅಂದಾಜನ್ನು ರೂ.21195.00 ಲಕ್ಷಗಳಿಗೆ ಪರಿಷ್ಕರಿಸಿ ಸಲ್ಲಿಸಿರುತ್ತಾರೆ.

ಸರ್ಕಾರವು ಹಾಲಿ ಜಾರಿಯಲ್ಲಿರುವ ಒಳಚರಂಡಿ ಯೋಜನೆಗಳ ಆರ್ಥಿಕ ಮಾದರಿಯು ಸರ್ಕಾರದ ಸಾಲದಿಂದ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸ್ಥಳೀಯ ಸಂಸ್ಥೆಗಳ ವಂತಿಕೆಯಿಂದ ಯೋಜನೆಯ ಅಂದಾಜನ್ನು ಭರಿಸಲಾಗುತ್ತಿದ್ದು, ಸದರಿ ಸ್ಥಳೀಯ ಸಂಸ್ಥೆಗಳಲ್ಲಿ ವಾಸಿಸುತ್ತಿರುವ ನಾಗರೀಕರ ಹಿತದೃಷ್ಟಿಯಿಂದ, ಪರಿಸರ ಸಂರಕ್ಷಣೆ ಹಿತದಲ್ಲಿ ಮತ್ತು ಮಲೀನ ನೀರು ನದಿಗಳನ್ನು/ಅಂತರ್ಜಲ ನೀರನ್ನು ಕಲುಷಿತಗೊಳಿಸದಿರುವ ದೃಷ್ಟಿಯಿಂದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಯೋಜನೆಗಳನ್ನು ಕಲ್ಪಿಸುವ ದೃಷ್ಟಿಯಿಂದ ಮತ್ತು ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಸಬಲವಲ್ಲದ ಕಾರಣ ಈ ಯೋಜನೆಗಳ ಪ್ರಯೋಜನವನ್ನು ಪಡೆಯುವುದರಿಂದ ವಂಚಿತರಾಗುವುದನ್ನು ತಡೆಯಲು ಸರ್ಕಾರವು, ಒಳಚರಂಡಿ ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಅನುದಾನದಿಂದ ಭರಿಸುವ ಉದ್ದೇಶ ಹೊಂದಿ ಸದರಿ ಯೋಜನೆಗಳ ಆರ್ಥಿಕ ಮಾದರಿಯನ್ನು ಆದೇಶ ಸಂಖ್ಯೆ:ನಅಇ 07 ಯುಡಬ್ಲ್ಯೂಎಸ್ 2011, ದಿ:20–7–2011ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ, ಆದೇಶಿಸಿರುತ್ತದೆ. ಅದರಂತೆ, ಈ ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡಂತೆ ನಿಗದಿಗೊಳಿಸಬೇಕಾಗಿರುತ್ತದೆ. ಸದರಿ ಆದೇಶದನ್ವಯ ತುಮಕೂರು ನಗರಸಭೆಯು ಯೋಜನೆಯ ಅಂದಾಜು ವೆಚ್ಚದ ಶೇ.10% ರಷ್ಟು ಮೊತ್ತವನ್ನು ಭರಿಸಬೇಕಾಗಿರುತ್ತದೆ.

| | |
|---|---|
| ಕರ್ನಾಟಕ ಸರ್ಕಾರದ ಅನುದಾನ (70%) | ರೂ. 14836.50 ಲಕ್ಷಗಳು |
| ಆರ್ಥಿಕ ಸಂಸ್ಥೆಗಳಿಂದ ಸಾಲ (20%) | ರೂ. 4239.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ (10%) | ರೂ. 2119.50 ಲಕ್ಷಗಳು |
| **ಒಟ್ಟು** | **ರೂ. 7290.00 ಲಕ್ಷಗಳು** |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾಯೋಜನೆಯಲ್ಲಿ ಸೇರಿಸಿ ಸದರಿ ಸಾಲಿನಲ್ಲಿ ಪ್ರವರ್ಗ **'ಡಿ'** ಅಡಿಯಲ್ಲಿ **ರೂ.7200.00** ಲಕ್ಷಗಳನ್ನು ಅನುವು ಮಾಡಲಾಗಿದೆ.

ಸರ್ಕಾರವು ಸದರಿ ಯೋಜನೆಯ ಅಂದಾಜಿನಲ್ಲಿ ಸೇರಿಸಿರುವ ಏಸ್ಕಲೇಷನ್ ದರವಾದ ರೂ.2002.00 ಲಕ್ಷಗಳನ್ನು ಸ್ಥಳೀಯ ಸಂಸ್ಥೆಯೇ ಭರಿಸಬೇಕಾಗಿರುವುದರಿಂದ ಯೋಜನೆಯ ಅಂದಾಜಿನಲ್ಲಿ ಸೇರಿಸಲು ಅವಕಾಶ ಕಲ್ಪಿಸಬಾರದೆಂದು ಸೂಚಿಸಿರುತ್ತದೆ. ಅದ್ದರಿಂದ ಸದರಿ ಮೊತ್ತವನ್ನು ಅಂದಾಜು ಪಟ್ಟಿಯಿಂದ ಹೊರತುಪಡಿಸಬೇಕಾಗಿರುತ್ತದೆ. ಇದಲ್ಲದೆ ಯೋಜನೆಯ ಅಡಿಯಲ್ಲಿ ಇ.ಟಿ.ಪಿ ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ.5ಕ್ಕೆ ಮಿತಿಗೊಳಿಸುತ್ತಿರುವುದರಿಂದ ಯೋಜನೆಯ ಮೂಲ ಅಂದಾಜು ಮೊತ್ತವಾದ ರೂ.16687.00 ಲಕ್ಷಗಳಿಗೆ ಶೇಕಡ 5ರಷ್ಟು ಇಟಿಪಿಯನ್ನು ಅಂದರೆ ರೂ.834.35 ಲಕ್ಷಗಳನ್ನು ಮತ್ತು ಇತರೆ ವೆಚ್ಚಗಳಾದ ರೂ.0.65 ಲಕ್ಷಗಳನ್ನು ಸೇರಿಸಿ ಯೋಜನೆಯ ಅಂದಾಜನ್ನು ರೂ.17522.00 ಲಕ್ಷಗಳಿಗೆ ಮಿತಿಗೊಳಿಸಬೇಕಾಗಿದೆ..

ಸರ್ಕಾರವು ಮಂಡಳಿಯ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 08 ಯುಡಿಎಸ್ 2010, ಬೆಂಗಳೂರು ದಿನಾಂಕ:24.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ನಗರಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ.17522.00 ಲಕ್ಷಗಳಲ್ಲಿ (ರೂ. ಹದಿನೇಳು ಸಾವಿರದ ಐದುನೂರ ಇಪ್ಪತ್ತೆರಡು ಲಕ್ಷಗಳು ಮಾತ್ರ) ಕಲ್ಪಿಸುವ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) ***The Escalation charges should not form part of the estimate. It should be borne by the concerned ULB. The estimate is reduced to such extent.***
2) *The board shall invite the tender immediately after the handing over of the land required under the scheme in order to avoid time and cost run over.*
3) *The consent of the ULB shall be obtained to meet the extra cost that might occur due to deviations, extra item works or variations in the Scheme.*
4) ***1/3 portion of the estimated cost of the scheme shall be provided in the annual action plan for the year 2012-13 of the board.***
5) *Adequate provision to be made by the Board in the following Years for timely completion of the Project.*
6) *Water rates as proposed by KUWS&DB have to be implemented to meet O & M cost of UGD.*
7) *KTPP provisions, quality control and timely completion should be ensured.*
8) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 643 Exp-9:2011 ದಿನಾಂಕ: 11.06.2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ.ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1999**

## ಇಂಧನ ಸಚಿವಾಲಯ

**ವಿಷಯ:** ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕರಿಗಾಲ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-824/2011–12/729 ದಿನಾಂಕ: 06.03.2012. ಮತ್ತು ಕ್ರೆಡಲ್/06/SH-824/ Karigala MHS/2011–12/846 ದಿನಾಂಕ: 12/14.03.2012.
2. ದಿನಾಂಕ: 26.04.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ ತಾಲ್ಲೂಕು, ಬಚ್ಚೇಗೌಡನ ಹಳ್ಳಿ ಗ್ರಾಮದಲ್ಲಿ ಹರಿಯುವ ನದಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕರಿಗಾಲ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಸಭೆಯಲ್ಲಿ ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಅರಣ್ಯ ಇಲಾಖೆಯ ಅನುಮತಿ ಪಡೆಯುವ ಷರತ್ತಿಗೊಳಪಟ್ಟು ಅನುಮತಿ ನೀಡಲು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 201 ಎನ್‌ಸಿಇ 2012, ಬೆಂಗಳೂರು, ದಿನಾಂಕ: 11.07.2012.**

ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ ತಾಲ್ಲೂಕು, ಬಚ್ಚೇಗೌಡನ ಹಳ್ಳಿ ಗ್ರಾಮದಲ್ಲಿ ಹರಿಯುವ ನದಿಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಕರಿಗಾಲ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಭೌಗೋಳಿಕ ಸ್ಥಳದಲ್ಲಿ ಸ್ಥಾಪಿಸಲು ಕೆಳಕಂಡ ಷರತ್ತಿಗೊಳಪಟ್ಟು **ಸರ್ಕಾರದ ಅನುಮೋದನೆ ನೀಡಲಾಗಿದೆ** :–

| | **Latitude** | Longitude |
|---|---|---|
| Weir | 12º08'09'' | 76º25'37'' |
| Power House | Toe of the weir | |
| FRL – 689.5 MSL<br>TWL – 671.5 MSL | | |

1 ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

3 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 435 ಎನ್‌ಸಿಇ 2011 ದಿನಾಂಕ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

4 ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕಣ ಶುಲ್ಕವನ್ನು ತುಂಬುವುದು.

5 ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7 ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12 ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

13 ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ / ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

14 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**ಪಿ.ಆರ್. 2033**

## ಇಂಧನ ಸಚಿವಾಲಯ

**ವಿಷಯ:** ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ 1.75 ಮೆಗಾ ವ್ಯಾಟ್ ಸಾಮರ್ಥ್ಯದ ಕರಿಮುದ್ದನಹಳ್ಳಿಕೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-825/2011–12/728 ದಿನಾಂಕ: 06.03.2012. ಮತ್ತು ಕ್ರೆಡಲ್/06/SH-825/Karimuddanahalli MHS/2012/845 ದಿನಾಂಕ: 12/14.03.2012.

2. ದಿನಾಂಕ: 26.04.2012ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕು, ಕರಿಮುದ್ದನಹಳ್ಳಿಕೆರೆಗೆ ಅಡ್ಡಲಾಗಿ 1.75 ಮೆಗಾ ವ್ಯಾಟ್ ಸಾಮರ್ಥ್ಯದ ಕರಿಮುದ್ದನಹಳ್ಳಿಕೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಸಭೆಯಲ್ಲಿ ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ 1.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಅರಣ್ಯ ಇಲಾಖೆಯ ಅನುಮತಿ ಪಡೆಯುವ ಷರತ್ತಿಗೊಳಪಟ್ಟು ಅನುಮತಿ ನೀಡಲು ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 202 ಎನ್‌ಸಿಇ 2012, ಬೆಂಗಳೂರು, ದಿನಾಂಕ: 11.07.2012.**

ಮೆ: ಮಾಸ್ಟರ್ ಪವರ್ A Division of Master Marine Services Pvt. Ltd. ಇವರಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕು, ಕರಿಮುದ್ದನಹಳ್ಳಿಕೆರೆಗೆ ಅಡ್ಡಲಾಗಿ 1.75 ಮೆಗಾ ವ್ಯಾಟ್ ಸಾಮರ್ಥ್ಯದ ಕರಿಮುದ್ದನಹಳ್ಳಿಕೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಭೌಗೋಳಿಕ ಸ್ಥಳದಲ್ಲಿ ಸ್ಥಾಪಿಸಲು ಕೆಳಕಂಡ ಷರತ್ತಿಗೊಳಪಟ್ಟು **ಸರ್ಕಾರದ ಅನುಮೋದನೆ ನೀಡಲಾಗಿದೆ** :–

| | Latitude | **Longitude** |
|---|---|---|
| Weir | 12°11'54 " | 76°21'36 " |
| Power House | Toe of the weir | |
| FRL – 722Mts<br>TWL-702 Mts | | |

1 ಈ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

3 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 435 ಎನ್‌ಸಿಇ 2011 ದಿನಾಂಕ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

4 ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

5 ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7 ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12 ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

13 ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ / ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

14 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**ಪಿ.ಆರ್. 2034**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆಯದ ಹಿಂದುಳಿದ ವರ್ಗದ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ನೀಡುವ ವಾರ್ಷಿಕ ವಿದ್ಯಾರ್ಥಿವೇತನ ದರಗಳನ್ನು ಪರಿಷ್ಕರಿಸುವ ಬಗ್ಗೆ ಮತ್ತು ಆದಾಯ ಮಿತಿಯನ್ನು ರೂ. 44,500/– ಗಳಿಗೆ ಹೆಚ್ಚಿಸುವ ಕುರಿತು.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 386 ಎಸ್ಇಡಬ್ಲ್ಯೂ 77 ದಿನಾಂಕ : 17–11–1977.

2 ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 21 ಓಬಿಸಿ 82, ದಿನಾಂಕ : 27–9–1984.

3 ಸರ್ಕಾರದ ಆದೇಶ ಸಂಖ್ಯೆ: ಸಕಇ 5 ಬಿಸಿಎ 95, ಬೆಂಗಳೂರು ದಿನಾಂಕ : 1–9–1995.

4 ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಏಕ ಕಡತ ಸಂಖ್ಯೆ : ಹಿಂವಕನಿ/ವಿವೇ–2/ಸಿಆರ್–09/2011–12

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ 1 ರಿಂದ 3 ರ ಆದೇಶಗಳಲ್ಲಿ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆಯದ ಹಿಂದುಳಿದ ವರ್ಗದ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ, ನೀಡುವ ವಾರ್ಷಿಕ ವಿದ್ಯಾರ್ಥಿ ವೇತನ ದರಗಳನ್ನು ಮತ್ತು ಆದಾಯ ಮಿತಿಯನ್ನು ನಿಗದಿಪಡಿಸಲಾಗಿತ್ತು.

2012–13ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ–139 ರಲ್ಲಿ 'ಹಿಂದುಳಿದ ವರ್ಗಗಳ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಾರ್ಷಿಕ ವಿದ್ಯಾರ್ಥಿವೇತನವನ್ನು 5 ರಿಂದ 7ನೇ ತರಗತಿಯವರಗೆ 75/– ರೂ.ಗಳಿಂದ 250/– ರೂ.ಗಳಿಗೆ ಹಾಗೂ 8 ರಿಂದ 10ನೇ ತರಗತಿಯವರಿಗೆ 100/– ರೂ.ಗಳಿಂದ 500/–ರೂ.ಗಳಿಗೆ ಹೆಚ್ಚಿಸಲಾಗಿದೆ. ಬಾಲಕಿಯರಿಗೆ ವಾರ್ಷಿಕ ವಿದ್ಯಾರ್ಥಿ ವೇತನವನ್ನು 100/ ರೂ.ಗಳಿಂದ 600/– ರೂ.ಗಳಿಗೆ ಹೆಚ್ಚಿಸಲಾಗಿದೆ. ಈ ವಿದ್ಯಾರ್ಥಿವೇತನ ಪಡೆಯಲು ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು 44,500/– ರೂ. ಗಳಿಗೆ ನಿಗದಿಪಡಿಸಲಾಗಿದೆ.'– ಎಂದು ಘೋಷಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. 4 ರಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಈ ಮೇಲಿನಂತೆ ವಿದ್ಯಾರ್ಥಿ ವೇತನ ದರಗಳನ್ನು ಪರಿಷ್ಕರಿಸಲು ಮತ್ತು ಆದಾಯ ಮಿತಿಯನ್ನು ಹೆಚ್ಚಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 160 ಬಿಎಂಎಸ್ 2012, ಬೆಂಗಳೂರು, ದಿನಾಂಕ: 29–6–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆಯದ, ಹಿಂದುಳಿದ ವರ್ಗದ ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ನೀಡುತ್ತಿರುವ ವಾರ್ಷಿಕ ವಿದ್ಯಾರ್ಥಿವೇತನ ದರಗಳನ್ನು ಈ ಕೆಳಗಿನಂತೆ ಪರಿಷ್ಕರಿಸಿ ಆದೇಶಿಸಲಾಗಿದೆ.

(ರೂ.ಗಳಲ್ಲಿ)

| ತರಗತಿ | ಬಾಲಕರು | | ಬಾಲಕಿಯರು | |
|---|---|---|---|---|
| | ಪ್ರಸ್ತುತ ದರ | ಹೆಚ್ಚಿಸಲಾದ ದರ | ಪ್ರಸ್ತುತ ದರ | ಹೆಚ್ಚಿಸಲಾದ ದರ |
| 5 ರಿಂ 7 | 75/– | 250/– | 75/– | 250/– |
| 8 ರಿಂದ 10 | 100/– | 500/– | 100/– | 600/– |

ಈ ಷರಿಷ್ಕೃತ ದರಗಳು 2012–13ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಅನ್ವಯವಾಗುವಂತೆ ಜಾರಿಗೆ ಬರುತ್ತವೆ.

**1. ವಿದ್ಯಾರ್ಥಿ ವೇತನ ಪಡೆಯಲು ಅರ್ಹತೆ :**

1. ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಪ್ರವರ್ಗ 1, 2ಎ, 3ಎ ಮತ್ತು 3 ಬಿ ಗೆ ಸೇರಿದವರಾಗಿರಬೇಕು (ಮುಸ್ಲಿಂ, ಜೈನ್ ಕ್ರಿಶ್ಚಿಯನ್, ಸಿಖ್, ಬೌದ್ಧ, ಪಾರ್ಸಿ, ಆಂಗ್ಲೋ ಇಂಡಿಯನ್ ಈ ಸಮುದಾಯಗಳ ವಿದ್ಯಾರ್ಥಿಗಳನ್ನು ಹೊರತುಪಡಿಸಿ)
2. ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯ ರೂ. 44,500/– ರ ಒಳಗೆ ಇರಬೇಕು.
3. ಸರ್ಕಾರದ, ಸರ್ಕಾರದ ಮಾನ್ಯತೆ ಪಡೆದು ಅನುದಾನಿತ/ಅನುದಾನ ರಹಿತ, ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಅರ್ಹರು.

4. ಆದರೆ, ಸರ್ಕಾರದ, ಸರ್ಕಾರದ ಅನುದಾನಿತ ವಿದ್ಯಾರ್ಥಿನಿಲಯಗಳಲ್ಲಿ/ವಸತಿ ಶಾಲೆಗಳಲ್ಲಿ, ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಅರ್ಹರಿರುವುದಿಲ್ಲ.

5. ಹಿಂದಿನ ತರಗತಿಯಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳು, ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುವುದಿಲ್ಲ.

6. ಹಿಂದಿನ ತರಗತಿಯಲ್ಲಿ ಶೇ 75 ಕ್ಕಿಂತ ಹೆಚ್ಚು ಹಾಜರಾತಿ ಹೊಂದಿದವರು ಮಾತ್ರ ಅರ್ಹರು.

**2. (ಅ) ಅರ್ಜಿ ಸಲ್ಲಿಸಲು ಹಾಗೂ ಮಂಜೂರು ಮಾಡಲು ವೇಳಾಪಟ್ಟಿ :**

ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ವೇಳಾಪಟ್ಟಿಯಂತೆ.

(ಆ) ಅರ್ಜಿ ನಮೂನೆಯನ್ನು ಇಲಾಖೆಯ ವೆಬ್‌ಸೈಟ್‌ನಿಂದ ಡೌನ್‌ಲೋಡ್ ಮಾಡಕೊಳ್ಳಬಹುದು ಅಥವಾ ಒಂದು ಪ್ರತಿಯನ್ನು ಬಹುಪ್ರತಿಗಳನ್ನಾಗಿ ಮಾಡಿ ಶಾಲಾ ಮುಖ್ಯಸ್ಥರು ಕೊಡಬಹುದು. ಅರ್ಜಿಗಳನ್ನು ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳ ಕಛೇರಿಯಿಂದ ಪಡೆಯಬೇಕಾಗಿಲ್ಲ.

(ಇ) ನವೀಕರಣ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸುವ ಅಗತ್ಯ ಇರುವುದಿಲ್ಲ. ಆದರೆ, ಯಾವುದೇ ನವೀಕರಣ ವಿದ್ಯಾರ್ಥಿ ಒಂದು ಶಾಲೆಯನ್ನು ಬಿಟ್ಟು, ಇನ್ನೊಂದು ಶಾಲೆಗೆ ಪ್ರವೇಶ ಪಡೆದಲ್ಲಿ, ಹೊಸದಾಗಿ ಪ್ರವೇಶ ಪಡೆದ ಶಾಲೆಯ ಮುಖ್ಯೋಪಾಧ್ಯಾಯರಿಗೆ ಆ ವಿದ್ಯಾರ್ಥಿ ಅರ್ಜಿ ಸಲ್ಲಿಸತಕ್ಕದ್ದು. ವಿದ್ಯಾರ್ಥಿಯು ಹಿಂದಿನ ಶಾಲೆಯಲ್ಲಿ ಬಿಡುಗಡೆ ಹೊಂದಿದ ಕೂಡಲೇ ವರ್ಗಾವಣೆ ಪತ್ರದೊಂದಿಗೆ (ಟಿ.ಸಿ) ಹಿಂದಿನ ಸಾಲಿನಲ್ಲಿ ವಿದ್ಯಾರ್ಥಿ ವೇತನ ಪಡೆದ ವಿವರಗಳನ್ನು ಸಲ್ಲಿಸತಕ್ಕದ್ದು. ಅಂತಹ ಸಂದರ್ಭಗಳಲ್ಲಿ ಹಿಂದಿನ ಶಾಲೆಯ ಮುಖ್ಯೋಪಾಧ್ಯಾಯರು ಸಂಬಂಧಪಟ್ಟ ಮಕ್ಕಳ ಹೆಸರನ್ನು ಅವರ ಶಾಲೆಯ ಪಟ್ಟಿಯಿಂದ ತೆಗೆದುಹಾಕತಕ್ಕದ್ದು.

(ಈ) ಅರ್ಜಿಗಳನ್ನು ಸಕಾಲದಲ್ಲಿ ಸಲ್ಲಿಸದೇ ಇದ್ದಲ್ಲಿ ಅಥವಾ ಅಪೂರ್ಣವಾಗಿ ಸಲ್ಲಿಸಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸತಕ್ಕದ್ದಲ್ಲ.

**3. ವಿದ್ಯಾರ್ಥಿ ವೇತನ ಮಂಜೂರು ಮಾಡುವ ವಿಧಾನ :**

1. ವಿದ್ಯಾರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಯನ್ನು (ಅನುಬಂಧ–1) ಶಾಲೆಯ ಮುಖ್ಯೋಪಾಧ್ಯಾಯರಿಗೆ ಸಲ್ಲಿಸಬೇಕು.

2. ಅರ್ಜಿಯೊಂದಿಗೆ ಸಲ್ಲಿಸಬೇಕಾದ ದಾಖಲಾತಿಗಳು :

1. ಹಿಂದಿನ ತರಗತಿಯ ದೃಢೀಕೃತ ಅಂಕಪಟ್ಟಿ,

2. ತಹಸೀಲ್ದಾರ್ ರವರಿಂದ ಪಡೆದ ಜಾತಿ ಪ್ರಮಾಣ ಪತ್ರ ಮತ್ತು ಕುಟುಂಬದ ವಾರ್ಷಿಕ ಆದಾಯ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳು

**(ಜಾತಿ ಪ್ರಮಾಣ ಪತ್ರ ಒಂದು ಬಾರಿ ನೀಡಿದಲ್ಲಿ ನಂತರದ ತರಗತಿಗಳಲ್ಲಿ ನೀಡುವ ಅವಶ್ಯಕತೆ ಇರುವುದಿಲ್ಲ. ಒಮ್ಮೆ ಪಡೆದ ಆದಾಯ ಪ್ರಮಾಣ ಪತ್ರ ಐದು ವರ್ಷಗಳವರೆಗೆ ಊರ್ಜಿತವಾಗಿರುತ್ತದೆ.)**

3. ಶಾಲೆಯ ಮುಖ್ಯೋಪಾಧ್ಯಾಯರು :

(ಅ) ಎಲ್ಲಾ, ನವೀಕರಣ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಹಾಗೂ ಎಲ್ಲಾ ಹೊಸ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಅನುಬಂಧ–2 ರಲ್ಲಿರುವಂತೆ ತರಗತಿವಾರು ಪಟ್ಟಿ ಮಾಡಬೇಕು.

(ಆ) ಈ ರೀತಿ ಪಟ್ಟಿಗಳನ್ನು ಮಾಡಿದ ನಂತರ ವಿವರಗಳನ್ನು ಗಣಕೀಕರಿಸಿ, ಪುನರ್ ಪರಿಶೀಲನೆ ಮಾಡಿ ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ (ಅನುಕ್ರಮವಾಗಿ ಜೋಡಿಸಿ), ಸಂಬಂಧಿಸಿದ ತಾಲ್ಲೂಕಿನ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಿಸ್ತರಣಾಧಿಕಾರಿಗಳಿಗೆ ಹಾರ್ಡ್ ಪ್ರತಿ ಹಾಗೂ ಸಾಫ್ಟ್ ಪ್ರತಿಯನ್ನು ಕಳುಹಿಸಬೇಕು.

**4. ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು :**

(1) ಶಾಲೆಗಳಿಂದ ಬಂದಿರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ, ವಿವರಗಳು ಸರಿಯಾಗಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳಬೇಕು.

(2) ತಾಲ್ಲೂಕಿನ ಎಲ್ಲಾ ಶಾಲೆಗಳಿಂದ ಪಡೆದಿರುವ ಮಾಹಿತಿಯನ್ನು ನವೀಕರಣ ಮತ್ತು ಹೊಸ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ **ಶಾಲಾವಾರು ಹಾಗೂ ತರಗತಿವಾರು ಕ್ರೋಢೀಕರಿಸಬೇಕು.**

(3) ಆ ತಾಲ್ಲೂಕಿಗೆ ಆ ಆರ್ಥಿಕ ವರ್ಷದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಬೇಕು.

(ಅ) ಮೊದಲನೇ ಆದ್ಯತೆ : ಎಲ್ಲಾ ಅರ್ಹ ನವೀಕರಣ ವಿದ್ಯಾರ್ಥಿಗಳಿಗೆ ಮಂಜೂರು ಮಾಡಬೇಕು.

(ಆ) ಎರಡನೇ ಆದ್ಯತೆ : ಹಿಂದುಳಿದ ವರ್ಗಗಳ ಪ್ರವರ್ಗ–1ರ ಎಲ್ಲಾ ವಿದ್ಯಾರ್ಥಿಗಳಿಗೆ ಮಂಜೂರು ಮಾಡಬೇಕು.

(ಇ) ಮೂರನೇ ಆದ್ಯತೆ : ಉಳಿದ ಮೊತ್ತವನ್ನು ಪ್ರವರ್ಗ–2ಎ, ಪ್ರವರ್ಗ–3ಎ ಮತ್ತು ಪ್ರವರ್ಗ3ಬಿಗೆ ಸೇರಿದ ಅರ್ಹ ವಿದ್ಯಾರ್ಥಿಗಳಿಗೆ MEANS CUM MERIT (ಆದಾಯ ಮತ್ತು ಅರ್ಹತೆ) ಆಧಾರದ ಮೇಲೆ ಈ ಕೆಳಗಿನ ಪ್ರಮಾಣದಂತೆ ಮಂಜೂರು ಮಾಡಬೇಕು.

| | |
|---|---|
| ಪ್ರವರ್ಗ – 2ಎ | 62% |
| ಪ್ರವರ್ಗ – 3ಎ | 17% |
| ಪ್ರವರ್ಗ – 3ಬಿ | 21% |
| ಒಟ್ಟು : | 100% |

(ಈ) ಅನುದಾನ ಲಭ್ಯವಿಲ್ಲದಿದ್ದಲ್ಲಿ, ಸ್ವೀಕರಿಸಿದ ಅರ್ಜಿಗಳಲ್ಲಿ ಬಾಕಿ ಉಳಿದ ಅರ್ಜಿಗಳನ್ನು ವ್ಯಪಗತ (ಲ್ಯಾಪ್ಸ) ಎಂದು ಪರಿಗಣಿಸತಕ್ಕದ್ದು.

(ಉ) ಮಂಜೂರಾತಿ ಆದೇಶಗಳನ್ನು 5 ಪ್ರತಿಗಳಲ್ಲಿ ಸಿದ್ದಪಡಿಸಬೇಕು.

ಮೊದಲನೇ ಪ್ರತಿಯನ್ನು ಬಿಲ್ಲಿನ ಜೊತೆ ಖಜಾನೆಗೆ ಸಲ್ಲಿಸಬೇಕು.

ಎರಡನೇ ಪ್ರತಿಯನ್ನು ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿ ಕಛೇರಿಗೆ ಸಲ್ಲಿಸಬೇಕು.

3ನೇ ಪ್ರತಿಯನ್ನು ಸಂಬಂಧಪಟ್ಟ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು.

4ನೇ ಪ್ರತಿಯನ್ನು ಸಂಬಂಧಪಟ್ಟ ಶಾಲೆಗೆ ಮತ್ತು

5ನೇ ಪ್ರತಿಯನ್ನು ತಾಲ್ಲೂಕು ಹಿಂದುಳಿದ ವಿಸ್ತರಣಾಧಿಕಾರಿಗಳ ಕಛೇರಿಯಲ್ಲಿ ನಿರ್ವಹಿಸಬೇಕು.

(ಊ) ಪ್ರತಿ ಶಾಲೆಯ ಎಲ್ಲಾ ವಿದ್ಯಾರ್ಥಿಗಳಿಗೆ ಮಂಜೂರಾದ ಒಟ್ಟು ಮೊತ್ತಕ್ಕೆ ಖಜಾನೆಯಿಂದ ಚೆಕ್ಕನ್ನು ಆಯಾ ಶಾಲೆಯ ಮುಖ್ಯೋಪಾಧ್ಯಾಯರ ಪದನಾಮದಲ್ಲಿ ಚೆಕ್ಕನ್ನು ಪಡೆದು, ಅವರಿಗೆ ಕಳುಹಿಸಬೇಕು.

(ಎ) ಶಾಲೆಯ ಮುಖ್ಯೋಪಾಧ್ಯಾಯರು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಶಾಲೆಯ ಹೆಸರಿನಲ್ಲಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಳ್ಳಬೇಕು.

(ಐ) ನಂತರ ಪ್ರತಿ ವಿದ್ಯಾರ್ಥಿಗೆ ವಿದ್ಯಾರ್ಥಿಯ ಹೆಸರಿನಲ್ಲಿ ಕ್ರಾಸ್ಡ್ ಚೆಕ್ ಮೂಲಕ ವಿದ್ಯಾರ್ಥಿ ವೇತನವನ್ನು ಶಾಲೆಯ ಮುಖ್ಯೋಪಾಧ್ಯಾಯರು ವಿತರಿಸಬೇಕು.

(ಒ) ವಿದ್ಯಾರ್ಥಿ ವೇತನವನ್ನು ವಿದ್ಯಾರ್ಥಿಗಳಿಗೆ ವಿತರಣೆ ಮಾಡಿರುವ ಬಗ್ಗೆ ಸ್ವೀಕೃತಿಯನ್ನು (ಅಕ್ವಿಟೆನ್ಸ) ಶಾಲಾ ಮುಖ್ಯೋಪಾಧ್ಯಾಯರ ದೃಢೀಕರಣದೊಂದಿಗೆ ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳಿಗೆ ಕಳುಹಿಸಬೇಕು. ಸದರಿ ಸ್ವೀಕೃತಿ ಪಟ್ಟಿಯನ್ನು ಹಿಂದುಳಿಧ್ಧ ವರ್ಗಗಳ ವಿಸ್ತರಣಾಧಿಕಾರಿಗಳ ಕಛೇರಿಯಲ್ಲಿ ನಿರ್ವಹಿಸತಕ್ಕದ್ದು. ಇದನ್ನು ಮಹಾಲೇಖಪಾಲರ/ ಜಿಲ್ಲಾ ಪಂಚಾಯತ್/ತಾಲ್ಲೂಕು ಪಂಚಾಯತ್ ಲೆಕ್ಕಪರಿಶೋಧನೆ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.

**5**. ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನಕ್ಕೆ ಸಂಬಂಧಿಸಿದ ವೆಚ್ಚವನ್ನು ಜಿಲ್ಲಾವಲಯ/ತಾಲ್ಲೂಕು ಪಂಚಾಯತ್ ಲೆಕ್ಕ ಶೀರ್ಷಿಕೆ 2225–00–103–0–66 ರಡಿ (ಯೋಜನೆ/ಯೋಜನೇತರ) ಭರಿಸತಕ್ಕದ್ದು.

**6. ವಿತರಿಸಲಾಗದೆ ಉಳಿಯುವ ವಿದ್ಯಾರ್ಥಿವೇತನವನ್ನು ಸರ್ಕಾರಕ್ಕೆ ಜಮೆ ಮಾಡುವ ಬಗ್ಗೆ :**

ಒಂದು ವೇಳೆ ಮಂಜೂರು ಮಾಡಲಾದ ವಿದ್ಯಾರ್ಥಿವೇತನವನ್ನು ವಿದ್ಯಾರ್ಥಿಗಳಿಗೆ ವಿತರಣೆ ಮಾಡಲು ಸಾಧ್ಯವಾಗದೇ ಇದ್ದಲ್ಲಿ ಆ ಮೊಬಲಗನ್ನು **"ಲೆಕ್ಕ ಶೀರ್ಷಿಕೆ"** 0250–00–102–0–02 ಪಾವತಿಯಾಗದ ವಿದ್ಯಾರ್ಥಿ ವೇತನಗಳು ಮತ್ತು ಶುಲ್ಕ ವರಮಾನದ ಕೊರತೆಯ ಅನುದಾನಗಳನ್ನು ಒಳಗೊಂಡಂತೆ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗಳಿಂದ ಬಂದ ಜಮೆ**"** ಗೆ ಸಂಬಂಧಿಸಿದ ತಾಲ್ಲೂಕು/ಜಿಲ್ಲಾ ಖಜಾನೆಯಲ್ಲಿ ಜಮೆ ಮಾಡತಕ್ಕದ್ದು.

**7. ತಪ್ಪು ಮಾಹಿತಿಗೆ ದಂಡ :**

ಯಾವುದೇ ವಿದ್ಯಾರ್ಥಿ/ ಪೋಷಕರು ಅಥವಾ ಶಿಕ್ಷಣ ಸಂಸ್ಥೆಯು ತಪ್ಪು ಮಾಹಿತಿ ನೀಡಿದ್ದಲ್ಲಿ ಅಂತಹವರ ವಿರುದ್ದ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಲಾಗುವುದು.

ಅ) ಭಾರತೀಯ ದಂಡ ಸಂಹಿತೆಯ ಕಲಂ 177 ಮತ್ತು 181ರ ಪ್ರಕಾರ ಶಿಕ್ಷೆಗೆ ಗುರಿಪಡಿಸಲಾಗುತ್ತದೆ.

ಆ) ಕಾನೂನಿನಂತೆ ಕ್ರಮ ಜರುಗಿಸುವುದರ ಜೊತೆಗೆ ವಿದ್ಯಾರ್ಥಿಯ ಪಡೆದ ಒಟ್ಟು ವಿದ್ಯಾರ್ಥಿ ವೇತನವನ್ನು ಈ ವಿದ್ಯಾರ್ಥಿಯ ತಂದೆ/ತಾಯಿ ಅಥವಾ ಪೋಷಕರಿಂದ ಭೂ ಕಂದಾಯ ಬಾಕಿಯೆಂದು ವಸೂಲಿ ಮಾಡಲಾಗುವುದು.

ಇ) ಮಂಜೂರು ಮಾಡುವ ಅಧಿಕಾರಿಗಳು ಸಹ ನಿಯಮಗಳ ವಿರುದ್ಧ ಮಂಜೂರು ಮಾಡಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿದ್ದಲ್ಲಿ ಅವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು.

**8. ಇತರೆ :**

1) ಪ್ರವರ್ಗವಾರು ಜಾತಿಗಳ ಪಟ್ಟಿ ಮತ್ತು ಕುಟುಂಬದ ವಾರ್ಷಿಕ ವರಮಾನಕ್ಕೆ ಸಂಬಂಧಿಸಿದಂತೆ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಜಾರಿಗೆ ಬರುತ್ತವೆ.

2) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಪ್ರತ್ಯೇಕವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಪ್ರವರ್ಗ–2ಬಿ (ಮುಸ್ಲಿಂ) ಮತ್ತು ಇತರೆ ಅಲ್ಪಸಂಖ್ಯಾತರುಗಳಾದ ಕ್ರಿಶ್ಚಿಯನ್, ಜೈನ್, ಬೌದ್ಧ, ಪಾರ್ಸಿ ಮತ್ತು ಸಿಖ್ಖ್, ಆಂಗ್ಲೋ ಇಂಡಿಯನ್ ಜನಾಂಗದ ವಿದ್ಯಾರ್ಥಿಗಳು ಈ ಸೌಲಭ್ಯವನ್ನು ಆ ಇಲಾಖೆಯಿಂದ ಪಡೆಯಬಹುದು. ಆದ್ದರಿಂದ ಇವರನ್ನು ಈ ನಿಯಮಗಳಿಂದ ಹೊರತುಪಡಿಸಲಾಗಿದೆ.

3) ಇಲಾಖೆಯ ವತಿಯಿಂದ ಆದಷ್ಟು ಶೀಘ್ರವಾಗಿ ತಂತ್ರಾಂಶವನ್ನು ರೂಪಿಸಿ, ವಿದ್ಯಾರ್ಥಿ ವೇತನವನ್ನು ನೇರವಾಗಿ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಜಮಾ ಮಾಡಲು ಕ್ರಮ ತೆಗೆದುಕೊಳ್ಳಬೇಕು.

ಇದನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 376 ವೆಚ್ಚ–3/12, ದಿನಾಂಕ : 6–6–2012 ರಡಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,**
**ನಂಜುಂಡಪ್ಪ**
ಸರ್ಕಾರದ ಉಪ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

**ಅನುಬಂಧ–1**

**ಕರ್ನಾಟಕ ಸರ್ಕಾರ**
**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**
**ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ ಮಂಜೂರಾತಿಗಾಗಿ ಅರ್ಜಿ**
(ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ ಮಾತ್ರ)
(ಮುಸ್ಲಿಂ, ಜೈನ್, ಕ್ರಿಶ್ಚಿಯನ್, ಸಿಖ್, ಬೌದ್ಧ, ಪಾರ್ಸಿ, ಆಂಗ್ಲೋ ಇಂಡಿಯನ್ ಸಮುದಾಯಗಳ ವಿದ್ಯಾರ್ಥಿಗಳನ್ನು ಹೊರತುಪಡಿಸಿ)

ದಿನಾಂಕದೊಂದಿಗಿನ ದೃಢೀಕರಿಸಿದ ಇತ್ತೀಚಿನ ಭಾವಚಿತ್ರ

**ಭಾಗ–1** ವರ್ಷ : 20 – 20

| | | |
|---|---|---|
| 1 | ವಿದ್ಯಾರ್ಥಿಯ ಹೆಸರು<br>ಸಂಪರ್ಕಿಸಬಹುದಾದ ಮೊಬೈಲ್ ಸಂಖ್ಯೆ | |
| 2 | ಲಿಂಗ | ಗಂಡು/ಹೆಣ್ಣು |
| 3 | ಹುಟ್ಟಿದ ದಿನಾಂಕ | |
| 4 | ತಂದೆ/ತಾಯಿ/ಪೋಷಕರ ಹೆಸರು | |
| 5 | ಅಂಚೆ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು ಜಿಲ್ಲೆ<br>ಪಿನ್ : |
| 6 | ಖಾಯಂ ವಿಳಾಸ | ಗ್ರಾಮ/ಬೀದಿ<br>ತಾಲ್ಲೂಕು ಜಿಲ್ಲೆ<br>ಪಿನ್ : |
| 7 | ವ್ಯಾಸಂಗ ಮಾಡುತ್ತಿರುವ ಶಾಲೆಯ ಹೆಸರು ಮತ್ತು ಪೂರ್ಣ ವಿಳಾಸ | ತಾಲ್ಲೂಕು ಜಿಲ್ಲೆ<br>ಪಿನ್ : |

| | | | | |
|---|---|---|---|---|
| 8 | ಹಾಲಿ ವ್ಯಾಸಂಗ ಮಾಡುತ್ತಿರುವ ತರಗತಿ | | | |
| 9 | ಪ್ರಸಕ್ತ ಸಾಲಿನಲ್ಲಿ ಶಾಲೆಗೆ ಪ್ರವೇಶ ಪಡೆದ ದಿನಾಂಕ | | | |
| 10 | ವಿದ್ಯಾರ್ಥಿಯ<br><br>(ತಹಸೀಲ್ದಾರ್‌ರಿಂದ ಪಡೆದ ಜಾತಿ/ ಆದಾಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಗಳನ್ನು ಲಗತ್ತಿಸಬೇಕು) | ಪ್ರವರ್ಗ : ಜಾತಿ :<br><br>ಕುಟುಂಬದ ವಾರ್ಷಿಕ ವರಮಾನ : | | |
| 11 | ವಿದ್ಯಾರ್ಥಿಯು ಹಿಂದಿನ ತರಗತಿಯಲ್ಲಿ ತೇರ್ಗಡೆಯಾಗಿದ್ದಾನೆಯೇ ?<br>(ಹಿಂದಿನ ತರಗತಿ/ವರ್ಷದ ಅಂಕಪಟ್ಟಿ ಲಗತ್ತಿಸಬೇಕು) | (ಹೌದು/ಇಲ್ಲ)<br>ಗರಿಷ್ಠ ಅಂಕ : ಪಡೆದ ಅಂಕ : ಶೇಕಡ | | |
| 12 | ಕರ್ನಾಟಕದಲ್ಲಿ ಎಷ್ಟು ವರ್ಷಗಳಿಂದ ವಾಸವಾಗಿರುತ್ತೀರಿ | ಅಂಕಿಗಳಲ್ಲಿ :<br>ಅಕ್ಷರಗಳಲ್ಲಿ : | | |
| 13 | ವಿದ್ಯಾರ್ಥಿಯು ಹಿಂದಿನ ವರ್ಷಗಳಲ್ಲಿ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು | | | |
| ಕ್ರ. ಸಂ. | ಶಾಲೆಯ ಹೆಸರು ಮತ್ತು ಪೂರ್ಣ ವಿಳಾಸ | ತರಗತಿ | ವ್ಯಾಸಂಗ ಮಾಡಿದ ಅವಧಿ | |
| | | | ರಿಂದ | ವರೆಗೆ |
| 1 | | | | |
| 2 | | | | |
| 14 | ವಿದ್ಯಾರ್ಥಿಯ ಬ್ಯಾಂಕ್ ಖಾತೆ ಸಂಖ್ಯೆ | | | |
| 15 | ರಾಷ್ಟ್ರೀಕೃತ ಬ್ಯಾಂಕಿನ ಹೆಸರು | | | |
| 16 | ಬ್ಯಾಂಕ್ ಶಾಖೆಯ ಹೆಸರು | | | |
| 17 | ಬ್ಯಾಂಕಿನ NEFT ಅಥವಾ IFSC ಕೋಡ್ | | | |

**ಘೋಷಣೆ**

ಕುಮಾರ/ಕುಮಾರಿ . . . . . . . . . . . . . . . . . . . . , , , ತಂದೆ/ತಾಯಿ/ಪೋಷಕರು . . . . . . . . . . . . . . . . . . . . . . . . . ಆದ ನಾನು ಪ್ರಮಾಣೀಕರಿಸುವುದೇನೆಂದರೆ, ಮೇಲಿನ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿರುತ್ತದೆ. ಒಂದು ವೇಳೆ ಮೇಲೆ ತಿಳಿಸಿರುವ ಮಾಹಿತಿಯು ಸುಳ್ಳು ಎಂದು ಕಂಡು ಬಂದಲ್ಲಿ ಕಾನೂನು ರೀತ್ಯ ಕ್ರಮ ಜರುಗಿಸಬಹುದು ಎಂಬುದಾಗಿ ಒಪ್ಪಿರುತ್ತೇನೆ.

ದಿನಾಂಕ :

ಸಹಿ : ಸಹಿ :

(ತಂದೆ/ತಾಯಿ/ಪೋಷಕರ) ಹೆಸರು : ವಿದ್ಯಾರ್ಥಿಯ ಹೆಸರು :

**ಸೂಚನೆ :**

1. ಪ್ರವರ್ಗ/ಜಾತಿಯ ವಿವರಗಳನ್ನು ಇಲಾಖೆಯ ವೆಬ್ ಸೈಟ್ www.backwardclasses.kar.nic.in ರಲ್ಲಿ ಪಡೆಯಬಹುದು.
2. ಅರ್ಜಿಯನ್ನು ವಿದ್ಯಾರ್ಥಿಯು ಆಯಾ ಶಾಲೆಯ ಮುಖ್ಯೋಪಾಧ್ಯಾಯರಿಗೆ ದೃಢೀಕರಿಸಿದ, ಅಂಕಪಟ್ಟಿ, ಜಾತಿ/ಆದಾಯ ಪ್ರಮಾಣ ಪತ್ರಗಳನ್ನು ಲಗತ್ತಿಸಿ ಸಲ್ಲಿಸಬೇಕು.
3. ಜಾತಿ ಪ್ರಮಾಣ ಪತ್ರ ಒಮ್ಮೆ ಸಲ್ಲಿಸಿದರೆ ಸಾಕು. (ಒಮ್ಮೆ ನೀಡಿದ ಆದಾಯ ಪ್ರಮಾಣ ಪತ್ರ 5 ವರ್ಷಗಳವರೆಗೆ ಚಾಲ್ತಿಯಲ್ಲಿರುತ್ತದೆ)
4. ಹಿಂದಿನ ತರಗತಿಯಲ್ಲಿ ಕನಿಷ್ಠ ಶೇ 75 ರಷ್ಟು ಹಾಜರಾತಿ ಹೊಂದಿರಬೇಕು.
5. ವಿದ್ಯಾರ್ಥಿ ವೇತನವನ್ನು ವಿದ್ಯಾರ್ಥಿಯ ಬ್ಯಾಂಕ್ ಖಾತೆಗೆ ಜಮಾ ಮಾಡುವ ಕಾರಣ, ತಮ್ಮ ಬ್ಯಾಂಕ್ ಖಾತೆಯ NEFT/IFSC ಕೋಡ್ ವಿವರಗಳನ್ನು ಕಡ್ಡಾಯವಾಗಿ ತಪ್ಪಿಲ್ಲದಂತೆ ನಮೂದಿಸಬೇಕು.

**ಭಾಗ–2**

**ಶಾಲಾ ಕಛೇರಿಯ ಉಪಯೋಗಕ್ಕೆ**

| ಭಾಗ–1ರಲ್ಲಿ ನಮೂದಿಸಿರುವ ವಿವರಗಳಲ್ಲಿ ವ್ಯತ್ಯಾಸಗಳಿದ್ದಲ್ಲಿ ನಮೂದಿಸಬೇಕು | ಇತರೆ : |
|---|---|
| 1. ಅಂಕ ಪಟ್ಟಿ : ಸರಿ ಇದೆ/ಇಲ್ಲ<br>2. ಜಾತಿ ಪ್ರಮಾಣ ಪತ್ರ : ಸರಿ ಇದೆ/ಇಲ್ಲ<br>3. ಆದಾಯ ಪ್ರಮಾಣ ಪತ್ರ : ಸರಿ ಇದೆ/ಇಲ್ಲ<br>4. ಹಿಂದಿನ ಸಾಲಿನಲ್ಲಿ ವಿದ್ಯಾರ್ಥಿ ವೇತನ ಮಂಜೂರಾಗಿದೆಯೇ ? : ಆಗಿದೆ/ಆಗಿಲ್ಲ<br>5. ಹಿಂದಿನ ತರಗತಿಯಲ್ಲಿ ವಿದ್ಯಾರ್ಥಿ ವೇತನ ಮಂಜೂರು ಆಗಿದ್ದಲ್ಲಿ ಮಂಜೂರಾತಿ ಸಂಖ್ಯೆ :<br>ದಿನಾಂಕ : | |
| ಹಿಂದಿನ ತರಗತಿಯ ಶಾಲಾ ಹಾಜರಾತಿ | ಶೇಕಡ : |

1. ಮೇಲ್ಕಂಡ ಮಾಹಿತಿಗಳು ನಮ್ಮ ಶಾಲೆಯಲ್ಲಿ ನಿರ್ವಹಿಸಿರುವ ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಲಾಗಿದ್ದು, ಕ್ರಮಬದ್ಧವಾಗಿರುತ್ತದೆ ಎಂದು ದೃಢೀಕರಿಸಿದೆ.
2. ಮೇಲ್ಕಂಡ ವಿದ್ಯಾರ್ಥಿ ವೇತನವನ್ನು ವಿದ್ಯಾರ್ಥಿಗೆ ಮಂಜೂರು ಮಾಡಬಹುದೆಂದು ಶಿಫಾರಸ್ಸು ಮಾಡಲಾಗಿದೆ.

ದಿನಾಂಕ :

ಸಹಿ :
(ಪ್ರಾಂಶುಪಾಲರು/ಮುಖ್ಯೋಪಾಧ್ಯಾಯರು)
(ಸಂಸ್ಥೆಯ ಮೊಹರು)

**ಸೂಚನೆ :**

1. ಶಿಕ್ಷಣ ಸಂಸ್ಥೆಯ ಮುಖ್ಯಸ್ಥರು ಭಾಗ–1ರ ವಿವರಗಳನ್ನು ಪರಿಶೀಲಿಸಿ ಭಾಗ–2 ರಲ್ಲಿ ವಿದ್ಯಾರ್ಥಿ ವಿವರಗಳನ್ನು ದೃಢೀಕರಿಸಬೇಕು. ನಂತರ ಅನುಬಂಧ–2 ರಲ್ಲಿನ ನಮೂನೆಯಲ್ಲಿ ವಿವರಗಳನ್ನು ಶಿಕ್ಷಣ ಸಂಸ್ಥೆ ಇರುವ ತಾಲ್ಲೂಕಿನ ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳಿಗೆ, ನಿಗಧಿಪಡಿಸಿದ ದಿನಾಂಕದೊಳಗಾಗಿ ಸಲ್ಲಿಸಬೇಕು.

**ಅನುಬಂಧ–2**

**ವಿದ್ಯಾರ್ಥಿವೇತನ ಮಂಜೂರಾತಿಗಾಗಿ ಶಾಲಾ ಮುಖ್ಯೋಪಾಧ್ಯಾಯರು ಹಿಂದುಳಿದ ವರ್ಗಗಳ**

**ವಿಸ್ತರಣಾಧಿಕಾರಿಗಳಿಗೆ ಸಲ್ಲಿಸಬೇಕಾದ ವಿವರಗಳು**

**(ನವೀಕರಣ ಮತ್ತು ಹೊಸ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಪಟ್ಟಿಯನ್ನು ಸಲ್ಲಿಸಬೇಕು)**

(ನವೀಕರಣ/ಹೊಸದು)

| | |
|---|---|
| ಶಾಲೆಯ ಹೆಸರು | |
| ಶಾಲೆಯ ಬ್ಯಾಂಕ್ ಖಾತೆ ಸಂಖ್ಯೆ | |
| ರಾಷ್ಟ್ರೀಕೃತ ಬ್ಯಾಂಕಿನ ಹೆಸರು | |
| ಬ್ಯಾಂಕ್ ಶಾಖೆಯ ಹೆಸರು (ಬ್ರಾಂಚ್) | |
| ಬ್ಯಾಂಕಿನ NEFT/IFSC ಕೋಡ್ | NEFT ಕೋಡ್ :<br>IFSC ಕೋಡ್ : |
| ಶಿಕ್ಷಣ ಸಂಸ್ಥೆಯ ದೂರವಾಣಿ ಸಂಖ್ಯೆ | |

| ಕ್ರ. ಸಂ. | ವಿದ್ಯಾರ್ಥಿ ಹೆಸರು | ಗಂಡು/ ಹೆಣ್ಣು | ತರಗತಿ | ಪ್ರವರ್ಗ | ಜಾತಿ | ವಿದ್ಯಾರ್ಥಿಯ ಬ್ಯಾಂಕ್ ಖಾತೆ ಸಂಖ್ಯೆ | ಬ್ಯಾಂಕ್ NEFT/IFSC ಕೋಡ್ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | | | | | | | |
| | **ಒಟ್ಟು** | | | | | | |

ಸ್ಥಳ : ಶಾಲೆಯ ಮುಖ್ಯೋಪಾಧ್ಯಾಯರ ಸಹಿ

ದಿನಾಂಕ : ಮೊಹರು

**ಅನುಬಂಧ–3**

**ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು ಶಾಲಾವಾರು ವಿದ್ಯಾರ್ಥಿ ವೇತನ ಮಂಜೂರು ಮಾಡಿದ ವಿವರಗಳು**

| | |
|---|---|
| ಶಾಲೆಯ ಹೆಸರು | |
| ಶಾಲೆಯ ಬ್ಯಾಂಕ್ ಖಾತೆ ಸಂಖ್ಯೆ | |
| ರಾಷ್ಟ್ರೀಕೃತ ಬ್ಯಾಂಕಿನ ಹೆಸರು | |
| ಬ್ಯಾಂಕ್ ಶಾಖೆಯ ಹೆಸರು (ಬ್ರಾಂಚ್) | |
| ಬ್ಯಾಂಕಿನ NEFT/IFSC ಕೋಡ್ | NEFT ಕೋಡ್ :<br>IFSC ಕೋಡ್ : |
| ಶಿಕ್ಷಣ ಸಂಸ್ಥೆಯ ದೂರವಾಣಿ ಸಂಖ್ಯೆ | |

| ಕ್ರ. ಸಂ. | ವಿದ್ಯಾರ್ಥಿ ಹೆಸರು | ಗಂಡು/ ಹೆಣ್ಣು | ತರಗತಿ | ಪ್ರವರ್ಗ | ಜಾತಿ | ವಿದ್ಯಾರ್ಥಿಯ ಬ್ಯಾಂಕ್ ಖಾತೆ ಸಂಖ್ಯೆ | ಬ್ಯಾಂಕ್ NEFT/ IFSC ಕೋಡ್ | ಮಂಜೂರು ಮಾಡಿದ ವಿದ್ಯಾರ್ಥಿ ವೇತನ (ರೂ. ಗಳಲ್ಲಿ) |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | | | | | | | | |
| | ಒಟ್ಟು | | | | | | | |

ಒಟ್ಟು ರೂಪಾಯಿ . . . . . . . . . . . . . . . . . . . . . . . . . . . . . . . . . . . . . . . . . . . . . . . . . . .

ಸ್ಥಳ : ಸಹಿ :

ದಿನಾಂಕ : ವಿಸ್ತರಣಾಧಿಕಾರಿಗಳು

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

. . . . . . . . . . . . ತಾಲ್ಲೂಕು

---

**ಪರಿಶೀಲನೆ ಮಾಡಲಾಗಿದೆ ಸರಿ ಇದೆ**

ದಿನಾಂಕ : ಸಹಿ:

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು

. . . . . . . . . . . . . . . . ಜಿಲ್ಲೆ

---

**ಸೂಚನೆ :**

1. ತಾಲ್ಲೂಕು ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು ವಿದ್ಯಾರ್ಥಿ ವೇತನ ಮಂಜೂರು ಮಾಡಿದ ನಂತರ ಮಂಜೂರಾತಿ ಆದ ವಿದ್ಯಾರ್ಥಿಗಳ ಅನುಬಂಧ–ಸಿ ಪಟ್ಟಿಯನ್ನು ಆಯಾಯ ಶಾಲೆಯ ಮುಖ್ಯೋಪಾಧ್ಯಾಯರಿಗೆ ಕಳುಹಿಸಬೇಕು.
2. ಮಂಜೂರಾತಿ ಪಟ್ಟಿಗೆ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಅನುಮೋದನೆಯನ್ನು ಪಡೆದು ನಂತರ ಪಾವತಿಸಬೇಕು.
3. ಈ ದಾಖಲೆಗಳನ್ನು ಆಡಿಟ್‌ಗಾಗಿ ಕಛೇರಿಯಲ್ಲಿ ನಿರ್ವಹಿಸತಕ್ಕದ್ದು.
4. ಮಂಜೂರಾತಿ ಆದೇಶಗಳನ್ನು 5 ಪ್ರತಿಗಳಲ್ಲಿ ಸಿದ್ದಪಡಿಸಬೇಕು. ಒಂದನೇ ಪ್ರತಿಯನ್ನು ಬಿಲ್ಲಿನ ಜೊತೆ ಖಜಾನೆಗೆ ಕಳುಹಿಸಬೇಕು. ಎರಡನೇ ಪ್ರತಿಯನ್ನು ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿ ಕಛೇರಿಗೆ ಸಲ್ಲಿಸಬೇಕು, 3ನೇ ಪ್ರತಿಯನ್ನು ಸಂಬಂಧಪಟ್ಟ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು, 4ನೇ ಪ್ರತಿಯನ್ನು ಸಂಬಂಧಪಟ್ಟ ಶಾಲೆಗೆ ಮತ್ತು 5ನೇ ಪ್ರತಿಯನ್ನು ತಾಲ್ಲೂಕು ಹಿಂದುಳಿದ ವಿಸ್ತರಣಾಧಿಕಾರಿಗಳ ಕಛೇರಿಯಲ್ಲಿ ನಿರ್ವಹಿಸಬೇಕು.

**ಪಿ.ಆರ್. 1941**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಮಾಹಿತಿ ಹಕ್ಕು ಅಧಿನಿಯಮ, 2005ರ ಸೆಕ್ಷನ್ 4(1)(ಎ) ಮತ್ತು 4(1)(ಬಿ) ಅಡಿ ಸ್ವಯಂಪ್ರೇರಣೆಯಿಂದ ಪ್ರಕಟಿಸಬೇಕಾದ ಕಛೇರಿ ಮಾಹಿತಿಗಳನ್ನು ಮತ್ತು ಕಡತಗಳನ್ನು ಗಣಕೀಕರಣಗೊಳಿಸಿದ ವಿಷಯಸೂಚಿಯೊಂದಿಗೆ ಕಡತ ನಿರ್ವಹಣೆಯ ಅನುಷ್ಠಾನದ ಬಗ್ಗೆ ಉಸ್ತುವಾರಿ ಮತ್ತು ವಿಮರ್ಶಿಸಲು ರಾಜ್ಯ ಮಟ್ಟದಲ್ಲಿ ಸಮಿತಿಯನ್ನು ರಚಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 44 ಆರ್‌ಟಿಐ 2009 ಬೆಂಗಳೂರು, ದಿನಾಂಕ: 21–7–2012**

ರಾಜ್ಯದ ಆಡಳಿತದಲ್ಲಿ ಪಾರದರ್ಶಕತೆ ಮತ್ತು ಉತ್ತರದಾಯಿತ್ವ ತರುವ ಹಾಗೂ ಕೋರಿರುವ ಮಾಹಿತಿಯನ್ನು ಶೀಘ್ರವಾಗಿ ವಿಲೇ ಮಾಡುವ ಉದ್ದೇಶದಿಂದ ಜಾರಿಗೆ ಬಂದಿರುವ ಮಾಹಿತಿ ಹಕ್ಕು ಅಧಿನಿಯಮ, 2005 ಅನುಷ್ಠಾನವಾಗಿ ಏಳು ವರ್ಷಗಳಾದರೂ, ಸಾರ್ವಜನಿಕ ಪ್ರಾಧಿಕಾರಗಳು ಸ್ವಯಂ ಪ್ರೇರಣೆಯಿಂದ ಕಡ್ಡಾಯವಾಗಿ ಪ್ರಕಟಿಸಬೇಕಾದ ಮಾಹಿತಿಗಳನ್ನು ಕಾಯ್ದೆಯ ಸೆಕ್ಷನ್ 4(1)(ಎ) ಮತ್ತು 4(1)(ಬಿ) ಅಡಿಯಲ್ಲಿ ಸಿದ್ದಪಡಿಸಿ ಪ್ರಕಟಿಸಿಲ್ಲದಿರುವುದನ್ನು ಕರ್ನಾಟಕ ರಾಜ್ಯ ಮಾಹಿತಿ ಆಯೋಗವು ಹಲವು ಪ್ರಕರಣಗಳಲ್ಲಿ ಗಮನಿಸಿದೆ. ತುರ್ತಾಗಿ ಸದರಿ ಮಾಹಿತಿಗಳನ್ನು ಸಿದ್ದಪಡಿಸಿ ಅರ್ಜಿದಾರರಿಗೆ ನೀಡಲು ಆಯೋಗ ಆದೇಶ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಸರ್ಕಾರದ ವಿವಿಧ ಇಲಾಖೆಗಳ ಈ ವಿಫಲತೆ ಬಗ್ಗೆ ಸ್ವಯಂಸೇವಾ ಸಂಸ್ಥೆಗಳು ಹಾಗೂ ಮಾಹಿತಿ ಹಕ್ಕು ಹೋರಾಟಗಾರರು ಸಹ ಸರ್ಕಾರದ ವಿರುದ್ಧ ತೀವ್ರವಾಗಿ ಪ್ರತಿಕ್ರಿಯಿಸುತ್ತಿರುವುದನ್ನು ಸರ್ಕಾರ ಗಮನಿಸಿದೆ.

ಒಂದು ಸಾರ್ವಜನಿಕ ಕಛೇರಿಯ ಧ್ಯೇಯೋದ್ದೇಶಗಳನ್ನು ಈಡೇರಿಸಲು ದಾಖಲೆಗಳ ನಿರ್ವಹಣೆಯು ಅತ್ಯಂತ ಸಹಕಾರಿಯಾಗಿದೆ. ಜನರಿಗೆ ಪ್ರತಿಸ್ಪಂದಿಸುವ ಆಡಳಿತವನ್ನು ನೀಡುವ ಹಾಗೂ ಆಡಳಿತ ವ್ಯವಸ್ಥೆಯನ್ನು ಸುಧಾರಿಸಲು ಕಡತಗಳ ನಿರ್ವಹಣೆಯ ಬಗ್ಗೆ ವಿಮರ್ಶೆ ಮತ್ತು ಉಸ್ತುವಾರಿ ಅಗತ್ಯವಾಗಿರುತ್ತದೆ. ಇಲ್ಲಿಯವರೆಗೆ ಕಡತ ನಿರ್ವಹಣೆ ವಿಧಾನದ ವಿಮರ್ಶೆ ಮತ್ತು ಉಸ್ತುವಾರಿ ಇಲ್ಲದಿರುವುದನ್ನು ಗಮನಿಸಲಾಗಿದೆ. ಆದ್ದರಿಂದ, ಸದರಿ ವಿಷಯಕ್ಕಾಗಿ ಹಾಗೂ ಅಧಿನಿಯಮದ ಅನುಷ್ಠಾನದ ಬಗ್ಗೆ ಪ್ರಗತಿಯನ್ನು ಹಾಗೂ ಸದರಿ ಅಧಿನಿಯಮದಡಿ ಸ್ವೀಕರಿಸಲಾದ ಅರ್ಜಿಗಳು, ಅವುಗಳ ವಿಲೇವಾರಿ, ಬಾಕಿ ಇರುವ ಅರ್ಜಿಗಳು ಹಾಗೂ ಇದಕ್ಕೆ ಕಾರಣಗಳು ಮುಂತಾದವುಗಳ ಬಗ್ಗೆ ವಿಮರ್ಶಿಸಲು ಒಂದು ರಾಜ್ಯ ಮಟ್ಟದ ಸಮಿತಿಯ ಅವಶ್ಯಕತೆ ಇರುತ್ತದೆ. ಆದ್ದರಿಂದ, ರಾಜ್ಯ ಮಟ್ಟದಲ್ಲಿ ಅಧಿಕಾರಿಗಳನ್ನೊಳಗೊಂಡ ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷರು |
| 2. | ಸಂಬಂಧಪಟ್ಟ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು | ಸದಸ್ಯರು |
| 3. | ಸಂಬಂಧಪಟ್ಟ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಇಲಾಖೆ, ಮುಖ್ಯಸ್ಥರುಗಳು/ ನಿಗಮ/ ಮಂಡಳಿಯ ವ್ಯವಸ್ಥಾಪಕ ನಿರ್ದೇಶಕರು/ ಕಾರ್ಯದರ್ಶಿಗಳು | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ–ಜನಸ್ಪಂದನ) | ಸಂಚಾಲಕರು |

ರಾಜ್ಯ ಮಟ್ಟದ ಈ ಸಮಿತಿಯು ಪ್ರತಿ ಎರಡು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು.

ರಾಜ್ಯ ಮಟ್ಟದ ಸಮಿತಿಯ ಕರ್ತವ್ಯ ಮತ್ತು ಜವಾಬ್ದಾರಿಗಳು ಈ ಕೆಳಕಂಡಂತಿವೆ :

1. ಸದರಿ ಸಮಿತಿಯು ರಾಜ್ಯದಲ್ಲಿ ಮಾಹಿತಿ ಹಕ್ಕು ಅಧಿನಿಯಮ, 2005ರ ಅನುಷ್ಠಾನದ ಬಗ್ಗೆ ಪ್ರಗತಿಯನ್ನು ಹಾಗೂ ಸದರಿ ಅಧಿನಿಯಮದಡಿ ಸ್ವೀಕರಿಸಲಾದ ಅರ್ಜಿಗಳು, ಅವುಗಳ ವಿಲೇವಾರಿ, ಬಾಕಿ ಇರುವ ಅರ್ಜಿಗಳು ಹಾಗೂ ಇದಕ್ಕೆ ಕಾರಣಗಳು ಮುಂತಾದವುಗಳ ಬಗ್ಗೆ ವಿಮರ್ಶಿಸುವುದರ ಜೊತೆಗೆ ಸೆಕ್ಷನ್ 4(1)(ಎ) ಮತ್ತು 4(1)(ಬಿ) ಹಾಗೂ 19(1)ರ ಅಡಿ ಸಾರ್ವಜನಿಕ ಪ್ರಾಧಿಕಾರ ಹಾಗೂ ಪ್ರಥಮ ಅಪೀಲು ಪ್ರಾಧಿಕಾರ ನಿರ್ವಹಿಸಬೇಕಾಗಿರುವ ಜವಾಬ್ದಾರಿಗಳನ್ನು ಕಡ್ಡಾಯವಾಗಿ ಅನುಷ್ಠಾನಗೊಳಿಸಿರುವ ಬಗ್ಗೆ ವಿಮರ್ಶಿಸುವ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.
2. ಮಾಹಿತಿ ಹಕ್ಕು ಅಧಿನಿಯಮ, 2005ರ ಸಮಗ್ರ ಅನುಷ್ಠಾನದ ಬಗ್ಗೆ ಪ್ರಗತಿಯನ್ನು ಪರಾಮರ್ಶಿಸತಕ್ಕದ್ದು.
3. ಕಡತ/ದಾಖಲೆಗಳನ್ನು ಗಣಕೀಕರಣಗೊಳಿಸಿ ವೈಜ್ಞಾನಿಕ ವಿಧಾನದಲ್ಲಿ ದಾಖಲೆಗಳನ್ನು ನಿರ್ವಹಿಸಿರುವುದನ್ನು ವಿಮರ್ಶಿಸತಕ್ಕದ್ದು.
4. ಕರ್ನಾಟಕ ಪಬ್ಲಿಕ್ ರೆಕಾರ್ಡ್ ಆಕ್ಟ್, 2010ರ ಅನುಷ್ಠಾನದ ಬಗ್ಗೆ ವಿಮರ್ಶಿಸತಕ್ಕದ್ದು.
5. ಸಂಬಂಧಪಟ್ಟ ಕಛೇರಿಯ ವೆಬ್‌ಸೈಟಿನಲ್ಲಿ ಸೆಕ್ಷನ್ 4(1)(ಎ) ಮತ್ತು 4(1)(ಬಿ) ಮಾಹಿತಿಯನ್ನು ಪ್ರಕಟಿಸಿರುವುದನ್ನು ವಿಮರ್ಶಿಸತಕ್ಕದ್ದು.

6. ಸೆಕ್ಷನ್ 4(1)(ಬಿ) ಅನ್ವಯ 17 ಅಂಶಗಳನ್ನೊಳಗೊಂಡ ಪರಿಪೂರ್ಣಗೊಳಿಸಿದ (**update**) ಮಾಹಿತಿಯನ್ನು ಆಯಾ ಪ್ರಾಧಿಕಾರಗಳು ಪ್ರತಿವರ್ಷ ಅಕ್ಟೋಬರ್ 30ರೊಳಗೆ ಪರಿಷ್ಕರಿಸಿ ವಿವಿಧ ಸಂಪರ್ಕಗಳ ಮೂಲಕ ಪ್ರತಿಯೊಂದು ಮಾಹಿತಿಯನ್ನು ಸಾರ್ವಜನಿಕರಿಗೆ ಸುಲಭವಾಗಿ ದೊರಕುತ್ತಿದೆಯೇ ಎಂಬ ಬಗ್ಗೆ ಪರಿಶೀಲಿಸುವುದು ಹಾಗೂ ಪ್ರಕಟಿಸಿರುವ ಬಗ್ಗೆ ಸಮಿತಿಯು ವಿಮರ್ಶಿಸತಕ್ಕದ್ದು.

7. ಸಮಿತಿಯು ಪ್ರಥಮ ಅಪೀಲು ಪ್ರಾಧಿಕಾರಗಳು ಮಾಹಿತಿ ಹಕ್ಕು ಅಧಿನಿಯಮ, 2005ರ ಸೆಕ್ಷನ್ 19(2) ರಡಿ ಮೇಲ್ಮನವಿಗಳನ್ನು ವಿಚಾರಣೆಗಾಗಿ ದಿನ ನಿಗದಿಗೊಳಿಸಿ ವಿಚಾರಣೆ ಮಾಡಿ ಅವುಗಳನ್ನು ನಿಗದಿತ ಅವಧಿಯಾದ 30 ದಿನಗಳೊಳಗಾಗಿ ಇತ್ಯರ್ಥಪಡಿಸುತ್ತಿರುವ ಬಗ್ಗೆ ಹಾಗೂ ಮಾಹಿತಿಯನ್ನು ಅರ್ಜಿದಾರರಿಗೆ ಒದಗಿಸಿರುವ ಬಗ್ಗೆ ಇಲ್ಲವೇ ನಿರಾಕರಿಸಿರುವ ಬಗ್ಗೆ ಕಾರಣಗಳನ್ನು ಲಿಖಿತವಾಗಿ ದಾಖಲಿಸಿರುವ ಬಗ್ಗೆ ಪರಿಶೀಲಿಸುವುದು.

8. ಮಾಹಿತಿ ಹಕ್ಕು ಅಧಿನಿಯಮದ ಅನುಷ್ಠಾನದಲ್ಲಿ ಯಾವುದಾದರೂ ಸಮಸ್ಯಗಳಿದ್ದಲ್ಲಿ ಮೇಲಿನ ಸಮಿತಿಯು ಅಂತಹ ಪ್ರಸ್ತಾವನೆಗಳನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಉನ್ನತ ಮಟ್ಟದ ಸಮಿತಿಯ ಮುಂದೆ ತರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಲ. ವೆಂಕಟಗಿರಿಯಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಆಡಳಿತ ಸುಧಾರಣೆ–ಜನಸ್ಪಂದನ ಕೋಶ–ಮಾಹಿತಿ ಹಕ್ಕು).

**ಪಿ.ಆರ್. 1985**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ:** 2009 ಮತ್ತು 2010 ನೇ ಸಾಲಿನ 'ಶ್ರೀ ನಿಜಗುಣ ಪುರಂದರ ಪ್ರಶಸ್ತಿ' ನೀಡುವ ಕುರಿತು

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 313 ಕಸಧ 2010, ದಿನಾಂಕ : 10–10–2011

2) ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ: ಕಸನಿ/15/ನಿ.ಪು.ಪ್ರ./2010–11, ದಿನಾಂಕ : 5–6–2012.

**ಪ್ರಸ್ತಾವನೆ:**

ಓದಲಾದ (1) ರ ಆದೇಶದಲ್ಲಿ 2009 ಮತ್ತು 2010ನೇ ಸಾಲಿನ 'ಶ್ರೀ ನಿಜಗುಣ ಪುರಂದರ ಪ್ರಶಸ್ತಿ'ಗೆ ಅರ್ಹರನ್ನು ಆಯ್ಕೆ ಮಾಡಲು ವಿದ್ವಾನ್ ಆರ್.ಕೆ. ಪದ್ಮನಾಭ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ. ಸದರಿ ಆಯ್ಕೆ ಸಮಿತಿಯು 2009ನೇ ಸಾಲಿನ 'ಶ್ರೀ ನಿಜಗುಣ ಪುರಂದರ ಪ್ರಶಸ್ತಿ'ಗೆ ಹಿಂದೂಸ್ತಾನಿ ಬಾನ್ಸುರಿ ವಾದ್ಯ ಸಂಗೀತ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿರುವ ಶ್ರೀ ವೆಂಕಟೇಶ ಗೋಡ್ಖಿಂಡಿ ಅವರನ್ನೂ, 2010ನೇ ಸಾಲಿನ 'ಶ್ರೀ ನಿಜಗುಣ ಪುರಂದರ ಪ್ರಶಸ್ತಿ'ಗೆ ಶ್ರೀ ಲಕ್ಷ್ಮಣದಾಸ್, ತುಮಕೂರು ಅವರನ್ನು ಆಯ್ಕೆ ಮಾಡಿದ್ದು, ಆಯ್ಕೆ ಸಮಿತಿಯ ಆಯ್ಕೆಯನ್ನು ಒಪ್ಪಿ ಈ ಸಂಬಂಧ ಸರ್ಕಾರಿ ಆದೇಶ ಹೊರಡಿಸುವಂತೆ ಕನ್ನಡ ಸಂಸ್ಕೃತಿ ಇಲಾಖೆಯ ಆಯುಕ್ತರು ಓದಲಾದ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 313 ಕಸಧ 2010, ಬೆಂಗಳೂರು, ದಿನಾಂಕ: 12–7–2012**

**ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2009ನೇ ಸಾಲಿನ 'ಶ್ರೀ ನಿಜಗುಣ ಪುರಂದರ ಪ್ರಶಸ್ತಿ'ಯನ್ನು ಶ್ರೀ ವೆಂಕಟೇಶ ಗೋಡ್ಖಿಂಡಿ ಅವರಿಗೆ ಮತ್ತು 2010ನೇ ಸಾಲಿನ 'ಶ್ರೀ ನಿಜಗುಣ ಪುರಂದರ ಪ್ರಶಸ್ತಿ' ಯನ್ನು ಶ್ರೀ ಲಕ್ಷ್ಮಣದಾಸ್, ತುಮಕೂರು ಅವರಿಗೆ ನೀಡಲು ಸರ್ಕಾರವು ಹರ್ಷಿಸುತ್ತದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ವಿ. ರಾಮಚಂದ್ರರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ,

**ಪಿ.ಆರ್. 2026**